

ರಥವನೇರಿದ ರಥಿಕನ್ಯಾರೆ ಪೇಳಮ್ಮಯ್ಯ
ಕಥಿತ ಧ್ಯಾತ ಸಂಸ್ತುತ ವಿತತಾನತ ॥ ಪ ॥

ಹಿತಕರದಿ ವಿಷಸ್ಮೃತಿ ಕಾಣಮ್ಮ ॥ ಅ.ಪ. ॥

ಹಾಟಕ ರತ್ನ ಸುಪೀಠ ಮಧ್ಯ ಮಂಟಪದಿ ನೋಡಮ್ಮಯ್ಯ
ತಾಟಂಕಯುತ ವಧೂಟಿಯರಿಕ್ಕೆಲದಿ ನೋಡಮ್ಮಯ್ಯ
ಕೋಟಿಭಾಸ್ಕರ ಪ್ರಭಾಲೇಪದಿ ರಾಜಿಸುವ ನೋಡಮ್ಮಯ್ಯ
ಆಟದಿ ಕುರುಜ ಮಹಾಟವಿ ಸವರಿ ಕಿ
ರೀಟಿಯ ಸಲಹಿದ ಖೇಟವಾಹನನೆ ॥ ೧ ॥

ಭುಜಗರಾಜ ಫಣಿಮಂಡಲ ಮಂಡಿತನೆ ನೋಡಮ್ಮಯ್ಯ
ವಿಜಯ ದರಾರಿ ಗದಾಂಬುಜ ಕರಭೂಷಿತನೆ ನೋಡಮ್ಮಯ್ಯ
ಗಜಚರ್ಮಧರಾದ್ಯನಿಮಿಷಸೇವಿತನೆ ನೋಡಮ್ಮಯ್ಯ
ಅಜನ ನಾಭಿಯಲಿ ಪಡೆದು ಚರಾಚರ
ಸೃಜಿಸೆ ಪೇಳ್ದ ನಿರಜ ಕಾಣಮ್ಮ ॥ ೨ ॥

ಏಕಾದ್ವಶ ಮಹಾಮಹಿಮ ರಮಾವಲ್ಲಭನು
ನೋಡಮ್ಮಯ್ಯ
ಶ್ವೇತದ್ವೀಪಾನಂತಾಸನ ವೈಕುಂಠ ಬಿಟ್ಟಿಳಿದು
ನೋಡಮ್ಮಯ್ಯ
ವೀತಭಯ ಜಗನ್ನಾಥ ವಿಠ್ಠಲ ಬಾರಲ್ಯಾಕೆ ಪೇಳಮ್ಮಯ್ಯ
ಭೂತಳದ ಜನರಭಿಲಾಷೆಯ ಸಲ್ಲಿಸಲು
ವಾತಾಶನ ಗಿರಿಗಿಳಿದ ಕಾಣಮ್ಮ ॥ ೩ ॥

—ಶ್ರೀ ಜಗನ್ನಾಥದಾಸರು.

ಸಂದರ್ಶಿಸಿ!

ಅನುಗ್ರಹೀತರಾಗಿರಿ!!

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ ತಿರುಮಲೆ



## ನವರಾತ್ರಿ ಬ್ರಹ್ಮೋತ್ಸವಗಳು 1983

### ಕಾರ್ಯಕ್ರಮ ವಿವರ

| ದಿನಾಂಕ | ವಾರ | ಹಗಲು ಉತ್ಸವ | ರಾತ್ರಿ ಉತ್ಸವ |
|---|---|---|---|
| 6-10-83 | ಗುರು | — | ಅಂಕುರಾರ್ಪಣೆ |
| 7-10-83 | ಶುಕ್ರ | ಬಂಗಾರದ ತಿರುಚ್ಚಿ ಉತ್ಸವ | ದೊಡ್ಡ ಶೇಷವಾಹನ |
| 8-10-83 | ಶನಿ | ಚಿಕ್ಕಶೇಷವಾಹನ | ಹಂಸವಾಹನ |
| 9-10-83 | ಭಾನು | ಸಿಂಹವಾಹನ | ಮುತ್ತಿನ ಪಲ್ಲಕ್ಕಿವಾಹನ |
| 10-10-83 | ಸೋಮ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 11-10-83 | ಮಂಗಳ | ಪಲ್ಲಕ್ಕಿಯಲ್ಲಿ ಮೋಹಿನೀ ಅವತಾರ | ಮಕರಕಂಠಿ, ಲಕ್ಷ್ಮೀಹಾರಾದ್ಯಾಭರಣಗಳೊಡನೆ **ಗರುಡವಾಹನ** |
| 12-10-83 | ಬುಧ | ಹನುಮದ್ವಾಹನ, ಸಂಜೆ ವಸಂತೋತ್ಸವ | ಗಜವಾಹನ |
| 13-10-83 | ಗುರು | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 14-10-83 | ಶುಕ್ರ | **ರಜತ ರಥೋತ್ಸವ** | ಅಶ್ವವಾಹನ |
| 15-10-83 | ಶನಿ | ಪಲ್ಲಕ್ಕಿ ಉತ್ಸವ, ಅವಭೃತ. | ತಿರುಚ್ಚಿ ವಾಹನ. |

ಸೂಚನೆ: ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿದಿನವೂ ಸಂಜೆ ವಿಶೇಷ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿದೆ. ಸಂಗೀತ, ಹರಿಕಥೆಗಳ ವಿಶೇಷ ಆಕರ್ಷಣೆಗಳಿರುತ್ತವೆ.

ತಿರುಮಲೆ ತಿರುಪತಿ ದೇವಸ್ಥಾನಗಳು.

ನೀವೂ ಬನ್ನಿ, ನಿಮ್ಮವರನ್ನೂ ಕರೆತನ್ನಿ.




ಗೌರವ ಸಂಪಾದಕರು :

ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.,

ಸಂಪಾದಕ :

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ॥


ಸಂಪುಟ ೧೪]  ಅಕ್ಟೋಬರ್ ೧೯೮೩  [ಸಂಚಿಕೆ ೫


# ವಿಷಯಸೂಚಿ

# ಸಂಪಾದಕೀಯ

ಮಂತ್ರಗಳೇಕೆ ಎಂಬುದು ಪ್ರಶ್ನೆ, ನಮ್ಮನ್ನುದ್ಧರಿಸಲು ಎಂಬುದು ಉತ್ತರ. ನಮ್ಮನ್ನುದ್ಧರಿಸುವುದಷ್ಟೇ ಅಲ್ಲ ಧರಿಸಲಿಕ್ಕೆ ಭರಿಸಲಿಕ್ಕೆ ಎಂಬುದು ವ್ಯಾಖ್ಯಾನ. ಹರಿಸಲೂ ಹೌದು ಎಂಬ ಭಯದಿಂದ ಕೂಡಿದ ಎಚ್ಚರಿಕೆ. ಸಮಾಜದಲ್ಲಿ ಮಂತ್ರಗಳ ಬಗ್ಗೆ ಇರುವ ಅಭಿಪ್ರಾಯಗಳನ್ನು ಗಮನಿಸಿದಾಗ ಇವು ನಿಜವೆಂದೇ ಎನ್ನಿಸುತ್ತವೆ.

ಮನನಾತ್ ತ್ರಾಯತ ಇತಿ ಮಂತ್ರಃ; ಮನನದಿಂದಾಗಿ ನಮ್ಮನ್ನು ಕಾಯುತ್ತದೆಯಾದ್ದರಿಂದ ಮಂತ್ರ ಎಂಬುದು ತಿಳಿದವರ ಮತ. ಯಾವುದರಿಂದ ಕಾಯುವಿಕೆ? ಮಾನವನು ಎಷ್ಟೇ ವಿಕಸನಶೀಲನಾದರೂ ಸಹ ಜನ್ಮಜರಾ ಮೃತ್ಯುಭಯ ಅವನನ್ನು ಬೆನ್ನಟ್ಟಿಯೇ ಇದೆ. 'ಜಾತಸ್ಯ ಹಿ ಮರಣಂ ಧ್ರುವಂ, ಧ್ರುವಂ ಜನ್ಮ ಮೃತಸ್ಯ ಚ' ಎಂಬ ಮಾತು ಇದ್ದೇ ಇದೆ. ಈ ಚಕ್ರದಲ್ಲಿ ನರ ಗಾಣದೆತ್ತು. ಮಂತ್ರವೆನ್ನುವುದು ಕ್ಷಣಿಕ ಶಾಶ್ವತ ಭೇದಗಳನ್ನು ನಿರೂಪಿಸಿ, ಪುನರಾವೃತ್ತಿಯಿಲ್ಲದ ಶಾಶ್ವತ ಬ್ರಹ್ಮಲೋಕವನ್ನು ಪಡೆಯಲು ನೆರವಾಗುತ್ತದೆ. ತಾತ್ಕಾಲಿಕ ಪ್ರಯೋಜನಗಳಾದ ಅಷ್ಟ ಸಿದ್ಧಿಗಳ ಅನರ್ಥತೆಯನ್ನು ನಿರೂಪಿಸಿ ತುರೀಯ ಪುರುಷಾರ್ಥಪ್ರಾಪ್ತಿಗೆ ಮಂತ್ರಗಳು ಮಾರ್ಗದರ್ಶಕವಾಗುತ್ತವೆ.

ಮಂತ್ರಾನುಷ್ಠಾನಕ್ಕೆ ಮುನ್ನ ಆ ಮಂತ್ರಾಧಿದೇವತೆಯನ್ನು ನಮ್ಮ ಆತ್ಮದಲ್ಲಿ ಆವಾಹನೆ ಮಾಡಿಕೊಂಡು ಮುಂದು ವರಿಯುತ್ತೇವೆ. ಆಚರಿಸುವವನ ಯೋಗ್ಯತಾಯೋಗ್ಯತೆಗಳನ್ನು ಅನುಸರಿಸಿ ಕೆಲಮಟ್ಟಿಗಿನ ಸಿದ್ಧಿ ಉಂಟಾಗುತ್ತದೆ. ದೇಹ ಧರ್ಮಗಳನ್ನು ಅನುಸರಿಸಿ ಈ ಸಾಧನೆ ನಡೆಯುವುದರಿಂದ ಇವು ಆ ಮಟ್ಟಿಗೆ ನಮ್ಮನ್ನು ಧರಿಸುತ್ತವೆ.

ಆದರೆ ಆದರ್ಶಗಳೆಷ್ಟೇ ಉನ್ನತವಾಗಿದ್ದರೂ ಸಾಧಿಸಿದ ವಿಜಯಗಳಿಂದ ಒಂದೊಂದು ಬಾರಿ ಮನ ಮದದಿಂದ ತುಂಬಿ ಸಮಾಜಮಾರಕಕಾರಣವಾಗುತ್ತದೆ. ದೈವದತ್ತವಾದ ಮೇಧಾಸಂಪತ್ತನ್ನು ಸಮಾಜಕ್ಕೆ ಅಹಿತವನ್ನುಂಟು ಮಾಡಲು ಬಳಸುವವರನ್ನು ಮಂತ್ರಾಧಿದೇವತೆಗಳು ತೀವ್ರವಾಗಿ ಶಿಕ್ಷಿಸುತ್ತಾರೆ. ಇಂತಹ ಪ್ರಯೋಗ ಮಾಡುವವರಿಗೆ ಇದರ ಅನುಭವವೂ ಇಲ್ಲದಿಲ್ಲ. ಹೀಗಾಗಿ ಮಂತ್ರಗಳು ಮಾನವೋದ್ಧರಣ, ಧಾರಣ, ಭರಣ ಸಂಹರಣ ಕಾರ್ಯಗಳನ್ನು ನಿರ್ವಹಿಸುತ್ತವೆಯೆಂದು ಭಾವಿಸಬಹುದು.

ಮಂತ್ರದ್ರಷ್ಟಾರರು ತಮ್ಮ ಶಕ್ತಿಯ ಪರಿಪೂರ್ಣ ಅವಗಾಹನೆಯಿಂದ ಮಂತ್ರಾನುಷ್ಠಾನವನ್ನು ವಿವರಪೂರ್ವಕ ವಾಗಿ ಮುಂದಿನ ತಲೆಮಾರುಗಳಿಗೆ ನೀಡಿದರು. ಆದರೆ ಇದರಲ್ಲಿರುವ ಸಿಕ್ಕು, ಗಂಟುಗಳನ್ನೆಲ್ಲ ಗಮನಿಸಿದ ಅವರು ಮಂತ್ರ ಗಳನ್ನೆಲ್ಲಾ ಸಾತ್ವಿಕ ರಾಜಸ ತಾಮಸಾರ್ಚನಾ ವಿಧಗಳೆಂದು ವಿಭಾಗಿಸಿ ಮಾನಸಿಕ ಪೂಜೆಯನ್ನು ಸಾತ್ವಿಕವೆಂದೂ ಎಲ್ಲರಿಗೂ ಎಟುಕುವಂತಿರುವುದರಿಂದ ಅರ್ಚಾಮೂರ್ತಿ ಪೂಜೆ ರಾಜಸವೆಂದೂ ಜೀವ ಹಿಂಸಕ ಪ್ರವೃತ್ತಿಗಳನ್ನು ಹೊಂದಿ ಪೂಜಿಸುವ ವಿಭಾಗಗಳನ್ನು ತಾಮಸಿಕವೆಂದೂ ವಿಭಾಗಿಸಿ ದೇಹಬುದ್ಧಿ ಧರ್ಮಗಳನ್ನು ಅನುಸರಿಸಿ ಯಾರುಯಾರು ಯಾವಯಾವ ಪೂಜಾವಿಧಾನಗಳನ್ನು ಅನುಸರಿಸಬೇಕೆಂಬುದನ್ನು ನಿರೂಪಿಸಿದರು.

ಇನ್ನೊಂದು ಬಗೆಯ ಸ್ಥೂಲ ವಿಂಗಡಣಾ ಪರಿಗಣನೆಯೆಂದರೆ ಸ್ತ್ರೀರೂಪ ದೇವತಾರಾಧನೆಯೆಲ್ಲ ವಾಮವೆಂದೂ, ಪುರುಷ ದೇವತಾರಾಧಕವಾದದ್ದೆಲ್ಲಾ ದಕ್ಷಸ್ಥಾಪಿತವಾದದ್ದರಿಂದ ದಕ್ಷಿಣಾರಾಧನೆಯೆಂದೂ ಗೆರೆಹಾಕಿದಂತೆ ನಿರ್ಣಯಿಸಿರುವುದೇ ಅಲ್ಲದೆ ವಾಮಾಚಾರ ತಾಮಸಿಕ ವಿಧಾನಗಳೆಲ್ಲ ಕ್ಷುದ್ರ ವಿದ್ಯೆಗಳೆಂದು ತೀರ್ಮಾನಿಸಿರುವುದು. ಇವುಗಳಲ್ಲಿ ಐಹಿಕ ಭೋಗ್ಯ ವಸ್ತುಗಳ ಪ್ರಾಧಾನ್ಯವನ್ನು ಗುರುತಿಸಿದ ಹಿರಿಯರು ಲೌಕಿಕ ಪ್ರಯೋಜನಗಳ ಈ ತಾಮಸಿಕ ವಿದ್ಯೆಗಳನ್ನು ಕ್ಷುತ್ (ಹಸಿವು) ವಿದ್ಯೆಯೆಂದು ನಿರ್ಣಯಿಸಿರಬಹುದು. ಅವು ಕಾಲಕ್ರಮದಲ್ಲಿ ನಾನಾರ್ಥಗಳನ್ನು ಪಡೆದುಕೊಂಡವು. ಎಂದರೆ ವಾಮವೆಲ್ಲ ತಾಮಸಿಕವಲ್ಲ ಎಂಬುದು ಮುಖ್ಯ. ಅನಾದಿಯಿಂದ ಬಂದ ಸೃಷ್ಟಿಧರ್ಮದ ಬಗೆಗಿನ ಭಾವನೆಗೆ ಅನುಗುಣವಾಗಿ ಈ ಮಂತ್ರ ಸಮೂಹ ವಿಭಜನೆಯೂ ನಡೆದಿರಬೇಕು ಎನ್ನಿಸುತ್ತದೆ. ಅನಂತನಾಮಕನಾದ ಪುರುಷೋತ್ತಮನನ್ನು ಪುರುಷ ತತ್ತ್ವ ಪ್ರತೀಕವಾಗಿಯೂ ಸಕಲಜೀವಜಾಲಹೇತುಭೂತವಾದ ಪ್ರಕೃತಿಯನ್ನು ಸ್ತ್ರೀರೂಪದೇವತೆಯನ್ನಾಗಿಯೂ ಭಾವಿಸ ಲಾಯಿತು.

ಮಂತ್ರಶಾಸ್ತ್ರ ಮತ್ತೊಂದು ಸತ್ಯವನ್ನೂ ಸಹ ಪ್ರಕಟಿಸುತ್ತಿದೆಯೇನೋ! ಸರಸ ಸಮರಸದ ಸೃಷ್ಟಿಯಲ್ಲಿ ಆ ಜನನೀಜನಕರು ಅವಿಭಾಜ್ಯ ಭಾಗಸ್ವಾಮಿಗಳು ಎನ್ನುವುದೇ ಆ ಸತ್ಯ ಶ್ರೀ ಚಂಡೀನವಾರ್ಣವಮಂತ್ರ ದ್ರಷ್ಟಾರರು ಬ್ರಹ್ಮ ವಿಷ್ಣು ರುದ್ರರೆಂದೂ, ಶ್ರೀ ಮಹಾಕಾಳಿ, ಶ್ರೀ ಮಹಾಲಕ್ಷ್ಮಿ, ಶ್ರೀ ಮಹಾಸರಸ್ವತಿಗಳು ಮಂತ್ರದೇವತೆಗಳೆಂದೂ, ತ್ರಿದೇವ್ಯ ತೀತವಾದ ಆ ಮಹಾಶಕ್ತಿಗೆ ಮಧುಕೈಟಭಪ್ರಶಮನಿ ಎಂದೂ. ಮಧುಕೈಟಭಘ್ನಿ, ಮಹಿಷೋನ್ಮೂಲಿನಿ – ಎಂಬ ಪ್ರಶಸ್ತಿಗ ಳಿವೆಯೆಂದೂ ಹೇಳಲಾಗಿದೆ. ಇನ್ನು ಶ್ರೀ ವಿದ್ಯಾಪರಾಷೋಡಶಾಕ್ಷರೀ ಪರಾದೇವತೆಯನ್ನು ತಾರ್ಕ್ಷ್ಯಾರೂಢಹರಿಹೃದಯ ಸರೋಜದಲ್ಲಿ ಪ್ರಕಾಶಿಸುವ ಪರಮ ಚಿತ್ಸ್ವರೂಪಿಣಿಯಾಗಿ ವರ್ಣಿಸಲಾಗಿದೆ.

ಪುರುಷ ಸತ್ತಾ ಮಂತ್ರಗಳಲ್ಲೂ ಸಾತ್ವಿಕ ಮಂತ್ರಗಳಲ್ಲೂ ಸಹ ಸವಿತಾದೇವತಾ, ಆದಿತ್ಯಹೃದಯರೂಪೀ ನಾರಾಯಣದೇವತಾ, ಶನೈಶ್ಚರೋ ದೇವತಾ ಎನ್ನುವ ಸ್ತ್ರೀಲಿಂಗ ಪ್ರತ್ಯಯವನ್ನು ಬಳಸಲಾಗಿರುವುದೂ ಸಹ ಹೊಸ ಅರ್ಥ

(38ನೇ ಪುಟ ನೋಡಿ)

ನವರಾತ್ರಿ

# ಸರಸ್ವತೀಪೂಜೆ

ಪುಣ್ಯಕ್ಷೇತ್ರವೆನಿಸಿದ ಭರತಖಂಡವು ಸಂಸ್ಕೃತಿಗೆ ತವರು ಮನೆಯಾಗಿದೆ. ಭಾರತದಾದ್ಯಂತ ವರ್ಷಂಪ್ರತಿ ಆಶ್ವೀಜ ಮಾಸದ ಶುಕ್ಲಪಕ್ಷದ ಪಾಡ್ಯದಿಂದ ತೊಡಗಿ ವಿಜಯದಶಮಿಯವರೆಗೆ ಜನರು ಅತ್ಯಂತ ಶ್ರದ್ಧೆ ಮತ್ತು ವಿಜೃಂಭಣೆಯಿಂದ ಆಚರಿಸುವ ನವರಾತ್ರಿಯ ದಿನಗಳು ಪ್ರತಿಯೊಬ್ಬ ಕಲೋಪಾಸಕನಿಗೂ ಸಂಸ್ಕೃತಿಯ ಆರಾಧಕನಿಗೂ ಪವಿತ್ರವಾಗಿವೆ. ಮಾನವನ ಅಜ್ಞಾನವನ್ನು ತೊಲಗಿಸಿ ಜ್ಞಾನದ ಜ್ಯೋತಿಯನ್ನು ಬೆಳಗಿಸುವ ಮಹಾಪ್ರಭಾವಶಾಲಿಯಾದ ಮಹಾಸರಸ್ವತಿಯನ್ನು ನಾವು ವರ್ಷಂಪ್ರತಿ ಪೂಜಿಸುತ್ತಿರುತ್ತೇವೆ.

ವರ್ಷಂಪ್ರತಿ ಮಹಾಲಯ ಅಮಾವಾಸ್ಯೆಯ ಮರುದಿನದಿಂದ ನವರಾತ್ರಿ ಪ್ರಾರಂಭವಾಗಿ ವಿಜಯ ದಶಮಿಗೆ ಕೊನೆಗೊಳ್ಳುತ್ತದೆ. ವಿಜಯದಶಮಿಯನ್ನು ಬಿಟ್ಟು ಹಿಂದಿನ ಒಂಬತ್ತು ದಿನಗಳಲ್ಲಿ ಮೊದಲ ಮೂರುದಿನಗಳಲ್ಲಿ ದೇವಿಯು ಮಹಾಕಾಳಿಯ ರೂಪಿನಿಂದಲೂ, ಹಿಂದಿನ ಮೂರು ದಿನಗಳಲ್ಲಿ ಮಹಾಲಕ್ಷ್ಮಿಯ ರೂಪಿನಿಂದಲೂ, ಪ್ರಸನ್ನೆಯಾಗಿ ಕೊನೆಯ ಮೂರು ದಿವಸಗಳಲ್ಲಿ ಮಹಾ ಸರಸ್ವತಿಯ ರೂಪಿನಿಂದಲೂ, ಪ್ರಸನ್ನೆಯಾಗಿ ಉಪಾಸಕರಿಂದ ಪೂಜೆಗೊಂಡು ವಿಜಯದಶಮಿಯಂದು ವಿದ್ಯಾ ವಿಜಯಪ್ರದೆಯಾಗಿ ಮೆರೆಯುವಳೆಂದು ಶಾಸ್ತ್ರಕಾರರ ನಂಬುಗೆಯಾಗಿದೆ.

ಸನಾತನ ಧರ್ಮೀಯರು ತಮ್ಮ ಉಪಾಸನಾದೇವತೆಗಳಲ್ಲೆಲ್ಲಾ ಸರಸ್ವತೀ ದೇವಿಗೆ ಇಷ್ಟೊಂದು ಪ್ರಾಧಾನ್ಯವೆಂದು ಪರಿಗಣಿಸಲು ಕೆಲವು ಕಾರಣಗಳಿವೆ. ಮಾನವನು ತನ್ನ ಬಾಳಿನಲ್ಲಿ ಯಶಸ್ಸನ್ನು ವಿಜಯವನ್ನು ಪಡೆಯಬೇಕಾದರೆ ಆತನಲ್ಲಿ ಹಣವೂ, ಗುಣವೂ ಇರಬೇಕು ಎಂಬುದು ಬಲ್ಲವರ ಮಾತಾಗಿದೆ. ಧನದ ಅಧಿದೇವತೆ ಲಕ್ಷ್ಮಿಯೆಂದೂ. ವಿದ್ಯಾಪ್ರಭಾವಫಲದಾದ ಗುಣದ ಅಧಿದೇವತೆಯು ಸರಸ್ವತಿಯೆಂದೂ ನಾವೆಲ್ಲರೂ ಅನಾದಿಕಾಲದಿಂದ ನಂಬಿಕೊಂಡು ಬರುವ ಮಾತಾಗಿದೆ.

ಸರಸ್ವತಿಯು ವಿದ್ಯೆಗೆ ಅಧಿದೇವತೆ. ವಿದ್ಯೆಯನ್ನೇ ಜ್ಞಾನವೆಂದೂ ಚಿತ್ತವೆಂದೂ ತತ್ವಜ್ಞರು ಹೇಳುತ್ತಾರೆ. ವಿದ್ಯೆಗೆ ಅಧಿ



ದೇವತೆಯನ್ನು ಕಲ್ಪಿಸಿ ಪ್ರಸನ್ನತೆಯಿಂದ ಆರಾಧಿಸುವ ಪದ್ಧತಿ ನಮ್ಮಲ್ಲಿ ಬಹಳ ಪೂರ್ವಕಾಲದಿಂದಲೂ ನಡೆದುಕೊಂಡು ಬಂದಿದೆ. ಜ್ಞಾನಕ್ಕೆ ಸಮನಾದ ಅಧಿದೇವತೆಯನ್ನು ಭರತಖಂಡದಲ್ಲಿ ಮಾತ್ರವಲ್ಲ ಇತರ ದೇಶಗಳಲ್ಲೂ ದೇವಿಯನ್ನೇ ಬೇರೆಬೇರೆ ಹೆಸರಿನಿಂದ ಪೂಜಿಸುತ್ತಾರೆ.

ಆಶ್ವೀಜ ಮಾಸದ ಶುಕ್ಲಪಕ್ಷದ ಪಾಡ್ಯದಂದು ನವರಾತ್ರಿಯ ಉತ್ಸವ ಆರಂಭವಾದರೂ ಶಾರದಾ ಪೂಜೆಯು ಸಪ್ತಮಿಯಂದು ಪ್ರಾರಂಭವಾಗುವುದು. ಅಂದು ಪೂಜೆಗೆ ಪುಸ್ತಕಗಳನ್ನು ಇಡುವ ಕ್ರಮ ಮಾಡಿಕೊಂಡಿದ್ದಿದೆ. ಪುಸ್ತಕಗಳ ಪೂಜೆಗೆ ಮೂಲಾ ನಕ್ಷತ್ರವೇ ಆಗಬೇಕೆಂದೂ. ಅಂದಿನಿಂದ ಮೂರು, ಯಾ, ಐದು ದಿವಸಗಳವರೆಗೆ ಪೂಜೆ ನೆರವೇರಬೇಕೆಂದೂ ಶಾಸ್ತ್ರರೂಢಿಯಾಗಿದೆ. ನವಮಿ ಪೂಜೆಯು ಪ್ರಧಾನವಾಗಿ ದಶಮಿಯದಿನ ಪೂಜಾ ವಿಸರ್ಜನೆಯಾಗಬೇಕೆಂದು ಶಾಸ್ತ್ರದ ನಿಯಮ. ಪುಸ್ತಕವನ್ನು ಪೂಜೆಗೆ ಇರಿಸಿದ ಬಳಿಕ ವಿದ್ಯಾರಂಭವಾಗುವ ತನಕ ಓದು ಬರಹ ಕೂಡದೆಂದು ಶಾಸ್ತ್ರ ನಿಯಮ." ವಿಜಯ ದಶಮಿಯಂದು ನೂತನ ವಿದ್ಯಾರಂಭಕ್ಕೆ ಶುಭದಿನವಾಗಿದೆ. ಹರಿವಾಣದಲ್ಲಿ ಅಕ್ಕಿಯಿಟ್ಟು ಹಿರಿಯರು ಕಿರಿಯರಿಗೆ ಸಂಪ್ರದಾಯಬದ್ಧವಾಗಿ ವಿದ್ಯಾರಂಭ ಮಾಡುತ್ತಾರೆ. ಅಂದಿನಿಂದ ಮಗುವಿಗೆ ನೂತನವಾಗಿ ವಿದ್ಯೆ ಆರಂಭವಾಯಿತೆಂದೂ ಮೂಲ ನಂಬಿಕೆ. ಶ್ರೀ ಶಾರದೆಯ ಸನ್ನಿಧಿಯಲ್ಲಿ ವಿದ್ಯಾರಂಭವಾಗುವಾಗ ಮಗುವಿಗೆ ಆಕೆಯು ಪ್ರಸನ್ನತೆಯಿಂದ ಜ್ಞಾನವನ್ನು ಕೊಡುವಳೆಂದು ಹಿರಿಯರ ಅನುಭವದ ಮಾತಾಗಿದೆ.

---

**ಶ್ರೀಮತಿ ಜಯಶ್ರೀ, ಜಿ. ಭಟ್**

> ಶರತ್ಕಾಲೇ ಪುರಾಯಸ್ಮಾನ್ನವಮ್ಯಾಂ ಬೋಧಿತಾಸುರೈ ।
> ಶಾರದಾ ಸಾ ಸಮಾಖ್ಯಾತಾ ಪೀಠೇ ಲೋಕೇ ಚ ನಾಮತಃ ॥
>
> ಶರತ್ಕಾಲ ಸರಸ್ವತಿಯ ಪೂಜೆ ಅನುಷ್ಠಾನಗಳಿಗೆ ಪ್ರಶಸ್ತವಾಗಿದ್ದು ಆ ಕಾರಣದಿಂದಲೇ ಸರಸ್ವತಿಯನ್ನು ಶಾರದೆ ಎಂದು ಕರೆಯಲಾಗಿದೆ.

# ಪುರಂದರದಾಸರು ಹಾಗೂ ತ್ಯಾಗರಾಜರು

ಕರ್ನಾಟಕ ಸಂಗೀತಪಿತಾಮಹರೆಂದು ಪ್ರಸಿದ್ಧ ರಾಗಿ, ಜ್ಞಾನ, ಭಕ್ತಿ, ವೈರಾಗ್ಯಗಳ ಮೂರ್ತಿ ಮತ್ಸ್ವರೂಪರಾದವರು ಪುರಂದರದಾಸರು. ತಮಿಳನಾಡಿನಲ್ಲಿ ಹುಟ್ಟಿ, ತೆಲುಗಿನಲ್ಲಿ ಕೃತಿಗಳನ್ನು ಬರೆದು ಕರ್ನಾಟಕ ಸಂಗೀತಕ್ಕೆ ಗೌರವ ಸ್ಥಾನವನ್ನು ಸ್ಥಾಪಿಸಿದವರು ತ್ಯಾಗರಾಜರು. ಉತ್ತಮ ಸಂಗೀತಕ್ಕೆ ಭಾಷಾಭೇದವಿಲ್ಲ. ಪ್ರಾಂತೀಯ ಅಭಿಮಾನ ದುರಭಿಮಾನಗಳಿಲ್ಲ. ಆದ್ದರಿಂದ ದಾಸರ ಕೀರ್ತನೆಗಳನ್ನು ಆಂಧ್ರದೇಶದಲ್ಲಿಯೂ, ತ್ಯಾಗರಾಜನ ಕೃತಿಗಳನ್ನು ಕರ್ನಾಟಕದಲ್ಲಿಯೂ ಎಲ್ಲರೂ ಹಾಡುತ್ತಾರೆ. ಭಕ್ತಿಯಿಂದ ಆ ವಾಗ್ಗೇಯಕಾರರನ್ನು ಸ್ಮರಿಸಿ ಧನ್ಯರಾಗುತ್ತಾರೆ. ಇವರ ಕೀರ್ತನೆಗಳನ್ನು ತುಲನಾತ್ಮಕ ಪರಿಶೀಲನೆ ಮಾಡುವುದು ಈ ವ್ಯಾಸದ ಪ್ರಧಾನೋದ್ದೇಶ.

ಕಾಲನೋಟದಿಂದ ನೋಡಿದರೆ ಪುರಂದರ ದಾಸರು 15 ನೆ ಶತಮಾನದಲ್ಲಿ ಬಾಳಿದವರು ತ್ಯಾಗರಾಜರು 18 ನೆ ಶತಮಾನ ಉತ್ತರಾರ್ಧ 19 ನೆ ಶತಮಾನ ಪೂರ್ವಾರ್ಧದಲ್ಲಿ ಜೀವಿಸಿದವರು. ದಾಸರು 84 ವರ್ಷಗಳು ಭೂಲೋಕ ವಾಸಮಾಡಿದರೆ ತ್ಯಾಗರಾಜಸ್ವಾಮಿಯವರು 80 ಸಂವತ್ಸರಗಳು ಬದುಕಿದರು. ದಾಸರು ಕಡೆಗಾಲ ಹಂಪೆಯಲ್ಲಿ ತುಂಗಭದ್ರಾನದೀತೀರದಲ್ಲಿ ಕಳೆದರೆ, ಸ್ವಾಮಿಯವರು ಕಾವೇರೀತೀರದಲ್ಲಿ ತಿರುವೈಯಾರ್‌ನಲ್ಲಿ ಬೃಂದಾವನಸ್ಥರಾದರು. ಶ್ರೀಮಂತರ ಕುಟುಂಬದಲ್ಲಿ ಹುಟ್ಟಿ ಭೋಗ ಭಾಗ್ಯಗಳನ್ನು ತ್ಯಜಿಸಿದ ಕೀರ್ತಿ ಪುರಂದರದಾಸರಿಗೆ ಸಲ್ಲುತ್ತದೆ. ಸಾಮಾನ್ಯ ಕುಟುಂಬದಲ್ಲಿ ಹುಟ್ಟಿ ಸಂಪದಕ್ಕೆ ಭೋಗಭಾಗ್ಯಗಳಿಗೆ ತಲೆ ಬಾಗಸದವರು ತ್ಯಾಗರಾಜರು. ದಾಸರಿಗೆ ಪುತ್ರಸಂತಾನ ಉಂಟು. ಶಿಷ್ಯಪರಿವಾರವು ಉಂಟು. ಆದರೆ ತ್ಯಾಗರಾಜರಿಗೆ ಪುತ್ರಸಂತಾನವಿಲ್ಲ. ಶಿಷ್ಯರೇ ಪುತ್ರರು. ಗುರುವಿನ ಕೀರ್ತಿ ನಿಲ್ಲಿಸಿದವರು ವಿಜಯದಾಸರು. ವಿಜಯದಾಸರು 'ಗುರು ಪುರಂದರದಾಸರೇ ನಿಮ್ಮ ಚರಣ ಕಮಲವ ನಂಬಿದೆ, ಬೇಸರದೆ ಭಜಿಸಿರೋ ಪುರಂದರದಾಸರ' ಎಂದು ನಮಿಸುತ್ತಾರೆ. ಇದೇ ರೀತಿ ವಾಲಾಜಪೇಟೆ ವೆಂಕಟರಮಣ ಭಾಗವತರ್ ತ್ಯಾಗರಾಜ ಮಂಗಳಾಷ್ಟಕವನ್ನು ಹಾಡಿದ್ದಾರೆ. ಗುರುಗಳಿಂದ ಪ್ರಶಂಸೆ ಹೊಂದಿದ ಕೀರ್ತಿ ಇವರಿಬ್ಬರಿಗೂ ಸಲ್ಲುತ್ತದೆ. 'ದಾಸರಂದರೆ ಪುರಂದರ ದಾಸರಯ್ಯ' ಎಂದು ಹೊಗಳಿದ್ದಾರೆ ವ್ಯಾಸರಾಯರು. ಅದೇ ಪ್ರಕಾರ 'ದೊರಕುನಾಯಿಟುವಂಟಿ ಶಿಷ್ಯುಡು' ಎಂದು ತ್ಯಾಗರಾಜರ ಹೊಗಳಿದ್ದಾರೆ ಶೊಂಠಿ ವೆಂಕಟರಮಣಯ್ಯನವರು. ಇವರಿಬ್ಬರಿಗೂ ಪ್ರಿಯವಾದದ್ದು ಉಂಛವೃತ್ತಿ. ಈ ವೃತ್ತಿಯಿಂದ ಲೋಕವನ್ನು ನೋಡಿದರು. ಜನರ ನಡತೆಗಳನ್ನು ಕಂಡರು. ಭಕ್ತಿಮತ ಪ್ರಚಾರಮಾಡಿದರು. ಅನುಕೂಲ ದಾಂಪತ್ಯ ಇವರಿಬ್ಬರ ಅದೃಷ್ಟವೆಂದು ಹೇಳಬಹುದು.



ತ್ಯಾಗರಾಜರು 24 ಸಾವಿರ ಕೀರ್ತನೆಗಳು ಹಾಡಿದರು. ಪ್ರಹ್ಲಾದ ಭಕ್ತಿವಿಜಯ, ನೌಕಾ ಚರಿತ, ಸೀತಾರಾಮವಿಜಯ, ಸಂಗೀತರೂಪಕಗಳನ್ನು ರಚಿಸಿದರು. ಆದರೆ ಈಗ 700 ಕೀರ್ತನೆಗಳು ಮಾತ್ರ ಲಭ್ಯವಾಗಿದೆ. ದಾಸರು ಹಾಡಿದ ಪದಗಳು 475000 ಪ್ರಚಾರದಲ್ಲಿರುವ ಕೀರ್ತನೆಗಳು 1000 ಮಾತ್ರ. 'ಪುರಂದರವಿಠಲ' ಅಂಕಿತ ಮುದ್ರೆ. 'ತ್ಯಾಗರಾಜು' ತ್ಯಾಗರಾಜರ ಮುದ್ರೆ.

ಈ ವಾಗ್ಗೇಯಕಾರರಿಬ್ಬರೂ ವಿಸ್ತೃತವಾಗಿ ದೇಶಾಟನೆ ಮಾಡಿದವರು. ಇವರು ವೀರ ವೈಷ್ಣವರಲ್ಲ, ವೀರ ಶೈವರೂ ಅಲ್ಲ. ಆದ್ದರಿಂದ ಇವರ ಕೀರ್ತನೆಗಳಲ್ಲಿ ಸಕಲದೇವತಾರಾಧನೆ ಕಾಣುತ್ತದೆ. ದಾಸರು 'ಶರಣು ಸಿದ್ಧಿ ವಿನಾಯಕ' ಎಂದು ವಿನಾಯಕನನ್ನು ಕೀರ್ತಿಸುತ್ತಾರೆ 'ಚಂದ್ರಚೂಡ ಶಿವಶಂಕರ ಪಾರ್ವತೀ ರಮಣ' ಎಂದು ಶಿವನನ್ನು ಹಾಡುತ್ತಾರೆ. 'ಶಿವ ದರುಶನ ನಮಗಾಯಿತೆ'ಂದು ಪಾರವಶ್ಯ ಹೊಂದುತ್ತಾರೆ. 'ಪಾಲಿಸೆ ಮುದ್ದು ಶಾರದೆ' ಎಂದು ಸರಸ್ವತೀದೇವಿ ಪ್ರಾರ್ಥನೆ ಮಾಡುತ್ತಾರೆ. 'ಪಾಲಿಸೆ ಎನ್ನ ಶ್ರೀ ಮಹಾಲಕ್ಷ್ಮಿ' ಎಂದು ಕೈ ಮುಗಿಯುತ್ತಾರೆ. ಇದೇ ಪ್ರಕಾರ ತ್ಯಾಗರಾಜಸ್ವಾಮಿಯವರು ಕೋಡೂರು ಸುಂದರೇಶ್ವರಸ್ವಾಮಿ, ತಿರುವೊತ್ತಿಯೂರ್ ವಡಿವುಡೈ ಅಮ್ಮನ್, ನಾಗಲಾಪುರಂ ನೀಲಾಯತಾಕ್ಷಿ, ಕುಮಾರಸ್ವಾಮಿ, ಧರ್ಮ ಸಂವರ್ಧನೀದೇವಿಗಳನ್ನು ಸ್ತುತಿಸಿದ್ದಾರೆ. 'ಶಿವ ಮಾಧವ ಭೇದಮು ಸೇಯಗರಾದು' (ಶಿವ ಮಾಧವ ಭೇದ ಮಾಡಬಾರದು) ಎನ್ನುವುದು ತ್ಯಾಗರಾಜರ ಕೇಳಿಕೆ.

ಇವರ ಕೃತಿಗಳಲ್ಲಿ ನರಸಿಂಹ, ಶ್ರೀಕೃಷ್ಣ, ಶ್ರೀ ರಾಮರ ಪದಗಳು ಹೆಚ್ಚು. ಇವರಿಬ್ಬರೂ ತಿರುಪತಿ ಸಂದರ್ಶನ ಮಾಡಿದ್ದಾರೆ. ಪುರಂದರದಾಸರು ತಿರುಪತಿ ವೆಂಕಟರಮಣನನ್ನು ಕುರಿತು ಹಲವಾರು ಹಾಡುಗಳು ಹಾಡಿದ್ದಾರೆ. ದಾಸರು 'ತಿರುಪತಿ ವೆಂಕಟರಮಣ ನಿನಗ್ಯಾತಕೊ ಬಾರದು ಕರುಣ' ಎಂದು ವೇದನೆಯಿಂದ ಹಾಡಿದ್ದಾರೆ. 'ಏಳಯ್ಯ ಬೆಳಗಾಯಿತು' ಎಂದು ಸುಪ್ರಭಾತ ಹೇಳುತ್ತಾರೆ. 'ಬಾರಯ್ಯ ವೆಂಕಟರಮಣ'ನೆಂದು ಸ್ವಾಗತ ನೀಡುತ್ತಾರೆ. 'ಬಂದು ನಿಂತಿಹ ನೋಡಿ' ಎಂದು ತಿರುಪತಿ ದೃಶ್ಯಗಳನ್ನು ನಮಗೆ ಪರಿಚಯ ಮಾಡುತ್ತಾರೆ. ಇದೇ ರೀತಿಯಲ್ಲಿ ತ್ಯಾಗರಾಜ ಸ್ವಾಮಿಯವರು 'ತೆರ ತೀಯಗರಾದಾ' 'ವೆಂಕಟೇಶ ನಿನು' ಕೀರ್ತನೆಗಳಲ್ಲಿ ಶ್ರೀನಿವಾಸನ ಗಾನ ಮಾಡುತ್ತಾರೆ. ಇದೇ ಪ್ರಕಾರ ಇವರಿಬ್ಬರೂ ರಂಗನಾಥ ಸ್ತುತಿ ಮಾಡಿದ್ದಾರೆ.

'ನರಸಿಂಹ ಮಂತ್ರವೊಂದಿರಲು ಸಾಕು', ನರಸಿಂಹನ ಪಾದ ಭಜನೆಯ ಮಾಡೋ – ಕೀರ್ತನೆಗಳು ದಾಸರ ನರಸಿಂಹನ ಭಕ್ತಿಯನ್ನು ಸ್ಪಷ್ಟಪಡಿಸುತ್ತವೆ. ಅದೇ ವಿಧದಲ್ಲಿ ತ್ಯಾಗರಾಜರು 'ನರಸಿಂಹ ನನು ಬ್ರೋವವೇ, 'ಶ್ರೀ ನರಸಿಂಹ ಮಾಂ ಪಾಹಿ' ಕೃತಿಗಳಲ್ಲಿ ನರಸಿಂಹಭಕ್ತಿ ಪ್ರತ್ಯಕ್ಷ

(35ನೇ ಪುಟ ನೋಡಿ)

ಡಾ॥ ಕೆ. ಸರ್ವೋತ್ತಮನ್



# ತೀರ್ಥಕ್ಷೇತ್ರ ದರ್ಶನ

## ದರ್ಶನೀಯ ಸ್ಥಳಗಳು

**ಶ್ರೀ ಬಿ. ಬಸವರಾಜ್‌ಸೇಟ್**

ಭರತ ಖಂಡವು ಅನಾದಿಕಾಲದಿಂದ ತೀರ್ಥ ಕ್ಷೇತ್ರಗಳಿಗೆ ಪ್ರಸಿದ್ಧವಾಗಿರುತ್ತದೆ. ತೀರ್ಥಗಳೆಂದರೆ ಪವಿತ್ರನದಿಗಳು ಉಗಮ ಹೊಂದಿದ ಪುನೀತವಾದ ಸರೋವರದ ತೀರಗಳು. ಕ್ಷೇತ್ರಗಳೆಂದರೆ ಪುಣ್ಯಸ್ಥಳಗಳು. ಆದ್ದರಿಂದ ಇವು ಯಾತ್ರಾಸ್ಥಳಗಳು. ಭರತ ಭೂಮಿಯಲ್ಲಿ ರಾಮ-ಕೃಷ್ಣ ಮೊದಲಾದವರು ಅವತಾರ ತಾಳಿದರು. ಪುರಂದರದಾಸ, ಕನಕದಾಸ, ಕಬೀರ, ಬಸವಣ್ಣ, ಅನೇಕ ಸಾಧುಸತ್ಪುರುಷರು ನಮ್ಮದೇಶವನ್ನು ಬೆಳಗಿರುತ್ತಾರೆ. ಈ ಮಹನೀಯರು, ನಿಂತು ನಲಿದು ಧರ್ಮಸ್ಥಾಪನೆ ಮಾಡಿದ ರಂಗಭೂಮಿಯು ಪವಿತ್ರವಾದ ತೀರ್ಥಕ್ಷೇತ್ರಗಳಾಗಿವೆ.

ಹಸುವಿನ ಮೈತುಂಬಾ ಹಾಲು ರಕ್ತದ ರೂಪದಲ್ಲಿ ಹರಿದರೂ ಮೊಲೆಯಲ್ಲೇ ಹಾಲು ದೊರೆಯುವಂತೆ ಪರಮಾತ್ಮನು ಸರ್ವವ್ಯಾಪಿಯಾಗಿದ್ದರೂ ಸಹ ಆತನು ಪ್ರಕಟವಾಗುವ ಸ್ಥಳಗಳೆಂದರೇ ತೀರ್ಥ ಕ್ಷೇತ್ರಗಳು. ಶ್ರೀರಾಮ ಜನಿಸಿದ ಅಯೋಧ್ಯೆ, ರಾಮೇಶ್ವರದಲ್ಲಿ ಸ್ಥಾಪಿಸಿದ ಲಿಂಗ, ಶ್ರೀಕೃಷ್ಣನ ಮಥುರಾ, ಪುಣ್ಯಯಾತ್ರೆಗಾಗಿ ಪ್ರವಾಸ ಮಾಡುವವರಿಗೆ ಆಯಾಯ ಸನ್ನಿವೇಶಗಳ ಸ್ಮರಣೆ ನೀಡುತ್ತವೆ.

ತಿರುಪತಿಯಲ್ಲಿ ನೆಲಸಿದ ತಿಮ್ಮಪ್ಪ, ತಿರುಮಲೆ ಕ್ಷೇತ್ರಗಳು ಅತ್ಯಂತ ಪುಣ್ಯಮಯವಾಗಿವೆ. ಗೌತಮ ಬುದ್ಧನ ಬುದ್ಧಗಂಗೆ ಬಸವೇಶ್ವರನ ಕಲ್ಯಾಣ ಪಟ್ಟಣ, ಭಾವುಕರಿಗೆ ಮನದಿಚ್ಛೆಯನ್ನು ಪೂರೈಸುವುವು.

ಪ್ರವಾಸದಿಂದ ಕ್ಷೇತ್ರದರ್ಶನ ಪಡೆದು ಅಲ್ಲಿಯ ಸಾಧು ಸತ್ಪುರುಷರ ಸಾನ್ನಿಧ್ಯದಿಂದ ನಿತ್ಯ ನಡೆಯುವ ಅರ್ಚನೆ, ಭಜನೆ, ಪ್ರಾರ್ಥನೆಗಳಿಂದಲೂ ಉಚ್ಛಮಟ್ಟದ ಮನೋಭೂಮಿಕೆ ಉಂಟಾಗುತ್ತದೆ. ಬುದ್ಧಿಯು ವಿಸ್ತೃತವಾಗುತ್ತದೆ, ತೀರ್ಥಗಳ ದರ್ಶನವಾಗಿ, ಆ ಭಾಗದ ಜನರ ದರ್ಶನವಾಗುತ್ತದೆ.

ಮನಸ್ಸಿಗೆ ಉಲ್ಲಾಸ ತರುವ ಆಶ್ಚರ್ಯಕಾರಕ ವಸ್ತುಗಳ ನಿರೀಕ್ಷಣೆ ಆಗಿ, ಬುದ್ಧಿ ಕೌಶಲ್ಯ ಬೆಳೆಯುತ್ತದೆ. ಗೃಹ ಸುಖವು ಲಭ್ಯವಾಗುತ್ತದೆ. ಕ್ಷೇತ್ರದರ್ಶನ ದೊಂದಿಗೆ ಪ್ರಕೃತಿಯ ಸೌಂದರ್ಯದ ಉಲ್ಲಾಸ ದೊರೆಯುತ್ತದೆ. ಸುಂದರವಾದ ವನದಲ್ಲಿ ಅನೇಕ ಪ್ರಕಾರದ ಮನೋಹರವಾದ ಧ್ವನಿಗಳು ಕೇಳಿ ಬರುತ್ತವೆ. ಭ್ರಮರಗಳ ಗುಂಜಾರವವೂ, ಕೋಗಿಲೆಗಳ ಮಂಜುಳಗಾನವ, ಪಾರಿವಾಳಗಳ ಕಲಕಲಧ್ವನಿಯೂ ಆನಂದವನ್ನು ಉಂಟುಮಾಡುತ್ತವೆ.

ಪ್ರಾಚೀನ ಕಾಲದಲ್ಲಿ ಪ್ರವಾಸದ ಯಾವ ಸುಖ ಸೌಕರ್ಯಗಳು ಇಲ್ಲದ ಕಾಲದಲ್ಲಿ ಸಹ ಭಾರತೀಯರು ಕಾಶೀ, ರಾಮೇಶ್ವರ, ತಿರುಪತಿ, ಯಾತ್ರೆಗಳನ್ನು ಮಾಡುತ್ತಿದ್ದರು. ಪ್ರಾಚೀನಕಾಲದಿಂದಲೂ ಭಾರತವು ಭೂಮಂಡಲಕ್ಕೆ ಆಧ್ಯಾತ್ಮ ವಿದ್ಯೆಯನ್ನು ಪ್ರಸರಿಸುತ್ತಲಿದೆ. ಚತುರ್ ವೇದಗಳು ಪ್ರಕಾಶಗೊಂಡಿದ್ದು ಭಾರತದಲ್ಲಿ.

ಶಿವಪುರಾಣದಲ್ಲಿ ಹನ್ನೆರಡು ಜ್ಯೋತಿರ್ಲಿಂಗಗಳ ವರ್ಣನೆಯಿದೆ. ಸೌರಾಷ್ಟ್ರದ ಸೋಮನಾಥ, ಶ್ರೀಶೈಲದ ಮಲ್ಲಿಕಾರ್ಜುನ, ಉಜ್ಜಯಿನಿಯ ಮಹಾಬಲೇಶ್ವರ, ನರ್ಮದಾ ತೀರದ ಓಂಕಾರೇಶ್ವರ, ಹಿಮಪರ್ವತದ ಕೇದಾರನಾಥ, ಡಾಕಿನಿಯ ಭೀಮಾಶಂಕರ, ಕಾಶಿಯ ವಿಶ್ವೇಶ್ವರ, ಗೋದಾವರಿ ಉಗಮ ಸ್ಥಳದ ತ್ರ್ಯಂಬಕೇಶ್ವರ, ಪರಳಿಯ ವೈಜನಾಥ. ದಾರುಕಾವನದ ನಾಗೇಶ್ವರ. ರಾಮಸೇತುವಿನ ನಾಗೇಶ್ವರ. ಶಿವಾಲಯದ ಘೃಶ್ಮೇಶ್ವರ,-ಇವುಗಳು ಅತ್ಯಂತ ಪ್ರಸಿದ್ಧವಾಗಿವೆ.

ಚತುರ್ಧಾಮಗಳಾದ ಜಗನ್ನಾಥಪುರಿ, ರಾಮೇಶ್ವರ. ದ್ವಾರಕಾ ಬದರಿ ಮತ್ತು ಹಿಮಾಲಯದ ಚತುರಧಾಮಗಳಾದ ಯಮುನೋತ್ರಿ, ಗಂಗೋತ್ರಿ, ಬದರಿ, ಕೇದಾರ, ಸಪ್ತಪುರಿಗಳಾದ ಅಯೋಧ್ಯಾ, ಮಥುರಾ, ಹರಿದ್ವಾರ, ಕಾಶೀ,ಕಾಂಚಿ. ಅವಂತಿಕಾ. ದ್ವಾರಕಾ. ಸಪ್ತನದಿಗಳಾದ – ಗಂಗಾ ಯಮುನಾ, ಗೋದಾವರಿ, ಸರಸ್ವತಿ, ಕಾವೇರಿ, ನರ್ಮದಾ. ಸಿಂಧು, ಸಪ್ತಕ್ಷೇತ್ರಗಳಾದ – ಕುರುಕ್ಷೇತ್ರ ಹರಹರ, ಪ್ರಭಾಸ ರೇಣುಕಾ, ಭೃಗ, ಜಗನ್ನಾಥ, ಸೂಕರ, ಪಂಚ ಸರೋವರಗಳಾದ ಬಿಂದು, ನಾರಾಯಣ, ಪಂಪಾ, ಪುಷ್ಕರ, ಮಾನಸ, ನವ ಆರಣ್ಯಗಳಾದ, ದಂಡಕಾರಣ್ಯ, ಸೈಂಧವಾರಣ್ಯ, ಪುಷ್ಕರಾರಣ್ಯ, ನೈಮಿ, ಕುರುಜಾಂಗಲ, ಉತ್ಪಲಾ, ಜಂಬೂ, ಹಿಮವ, ಅಬುದಾರಣ್ಯ, – ಇವುಗಳು ಅತ್ಯಂತ ಪವಿತ್ರಕ್ಷೇತ್ರಗಳಾಗಿವೆ.

ಇವುಗಳಲ್ಲದೇ, ವಿಷ್ಣುಸ್ಥಾನಗಳಾದ ಶ್ರೀರಂಗ, ಅಯೋಧ್ಯ, ದ್ವಾರಕಾ, ಮಥುರಾ,

ದೇವಪ್ರಯಾಗ, ಬದರಿಕಾಶ್ರಮ, ಗಯಾ, ಜಗನ್ನಾಥಪುರಿ, ವೆಂಕಟರಮಣಗಿರಿ, ಮುಕ್ತಿ ನಾರಾಯಣಗಯಾ ದೇವೀದೇವಾಲಯಗಳಾದ–ಕಂಚಿ ಕಾಮಾಕ್ಷಿ, ಮಧುರೆಮೀನಾಕ್ಷಿ. ಭ್ರಮರಾಂಬ ಕನ್ಯಾಕುಮಾರಿ, ಅಂಬಾ ಮಹಾಲಕ್ಷ್ಮೀ. ತುಳಜಾ ಭವಾನಿ. ಮಹಾಕಾಳಿ, ಲಲಿತಾ. ವಿಶಾಲಾಕ್ಷಿ, ಗಂಗಾಪತಿ. ಗುಹ್ಯಕೇಶರಿ, ಸುಂದರಿ ಗುಹಾಲಯಗಳಾದ ಅಜಂತಾ, ಎಲ್ಲೋರಾ. ಬಾದಾಮಿ, ಎಲಿಫೆಂಟಾ ಆಬುಪರ್ವತ.

ಹಾಗೂ ಜಲಪಾತಗಳಾದ ಗೇರುಸೊಪ್ಪೆ, ( ಜೋಗ ) ಕಪಿಲಧಾರಾ, ಶಿವಸಮುದ್ರ, ಗೋಕಾಕ, ತಾಮ್ರಪರ್ಣಿ, ಧುಂಧಾರಾ, ಹಾಗೂ ಪಾಪನಾಶಿ – ಪ್ರಮುಖವಾದ ಪ್ರೇಕ್ಷಣೀಯ ಸ್ಥಳಗಳಾಗಿವೆ. ಅಲ್ಲದೆ ಗೌರೀಶಂಕರ ಶಿಖರ, ದವಳಗಿರಿ, ನಂಗಾ ಪರ್ವತ, ನಂದಾದೇವಿ, ಬದರಿನಾಥ ಕೇದಾರನಾಥ,ಕೈಲಾಸ, ಅಮರನಾಥ, ಗಂಗೋತ್ರಿ, ಯಮುನೋತ್ರಿ, ಉದಕಮಂಡಲ. ಸಿಮ್ಲಾ, ಶ್ರೀನಗರ್, ಊಟಿ. ಮಹಾಬಲೇಶ್ವರ ಮೊದಲಾದ ಪರ್ವತ ಶಿಖರಗಳು ಅಲ್ಲದೆ, ಜೈನತೀರ್ಥಗಳು, ಬೌದ್ಧ ಸ್ತೂಪಗಳು, ಪ್ರೇಕ್ಷಣೀಯ ಸ್ಥಳಗಳು, ಪವಿತ್ರ ಕ್ಷೇತ್ರಗಳು ಆಗಿ ಮಾನವ ಸಮಾಜಕ್ಕೊಂದು ಧಾರ್ಮಿಕ ಆಸ್ತಿಗಳಾಗಿವೆ. ಕ್ಷೇತ್ರ ದರ್ಶನಮಾಡುವವರು ಕಾಮ, ಕ್ರೋಧ ಲೋಭ ಮೋಹಗಳನ್ನು ತ್ಯಜಿಸಬೇಕು.

ತಿರುಪತಿಯು ಚಿತ್ತೂರು ಜಿಲ್ಲೆಯ ಚಂದ್ರಗಿರಿಗೆ ಸೇರಿದೆ. ತಿರುಪತಿಯಿಂದ ಬೆಂಗಳೂರು, ಮದ್ರಾಸ್‌ಗೆ ನೇರಬಸ್ಸುಗಳಿವೆ. ಭಾರತದ ಅತ್ಯಂತ ಪ್ರಮುಖ್ಯ ಕ್ಷೇತ್ರವಾದ ತಿರುಪತಿಯಲ್ಲಿ ಛತ್ರಗಳಿವೆ. ಪುಷ್ಪತೋಟವಿದೆ. ಇಲ್ಲಿ ಕಪಿಲ ತೀರ್ಥ, ಗೋವಿಂದರಾಜನ ಗುಡಿ, ಕೋದಂಡ ರಾಮನ ಗುಡಿ ಅಲ್ಲದೇ ತಿರುಪತಿಯಲ್ಲಿ ಇನ್ನೂ ಅನೇಕ ದೇವಾಲಯಗಳಿವೆ. ಇಲ್ಲಿ ತಂಗಲು ಅನೇಕ ವಸತಿಗಳಿವೆ ಅಲ್ಲದೆ ಆಕಾಶಗಂಗೆ, ಜಾಬಾಲೀ ತೀರ್ಥ, ತುಂಬುರು ತೀರ್ಥ. ಪಾಂಡವ ತೀರ್ಥ. ಗೋಗರ್ಭತೀರ್ಥ. ಚಕ ತೀರ್ಥ, ವೈಕುಂಠ ತೀರ್ಥ, ಇವು ಪವಿತ್ರ ತೀರ್ಥಗಳು.

ಶ್ರೀ ವೆಂಕಟೇಶ್ವರ ವಿಗ್ರಹ ಉದ್ಭವ ಮೂರ್ತಿ. ದರ್ಶನ ಮಾತ್ರದಿಂದ ಸಕಲ ಕಾಮನೆಗಳು ಪೂರ್ಣವಾಗುತ್ತವೆ. ಪ್ರತಿದಿನ ಮುಂಜಾನೆ 6 ಗಂಟೆಯಿಂದ ಸಾಯಂಕಾಲ 10 ಗಂಟೆವರೆಗೆ ದೇವರ ದರ್ಶನ ದೊರೆಯುತ್ತದೆ.

ಭಾರತದೇಶ ದೇವ ಭೂಮಿ ಆಗಿದೆ. ಇಲ್ಲಿಯ ಕ್ಷೇತ್ರ ದರ್ಶನವು ಒಂದು "ಪುಣ್ಯಯಾತ್ರೆ" ಮಾನವ ಇಹ ಪರದಲ್ಲಿ ಸದ್ಗತಿ ಪಡೆಯಲು ಕ್ಷೇತ್ರದರ್ಶನವು ದಾರಿದೀಪವಾಗಿದೆ.



# ಶ್ರೀ ಪದ್ಮಾವತೀ ದೇವಾಲಯ



## ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

# ಶ್ರೀಮದ್ಭಗವದ್ಗೀತೆ

## ೫ ನೆಯ ಅಧ್ಯಾಯ

ಅರ್ಜುನ ಉವಾಚ–

ಸನ್ನ್ಯಾಸಂ ಕರ್ಮಣಾಂ ಕೃಷ್ಣ
ಪುನರ್ಯೋಗಂ ಚ ಶಂಸಸಿ।
ಯಚ್ಛ್ರೇಯ ಏತಯೋರೇಕಂ
ತನ್ಮೇ ವಪ ಸುನಿಶ್ಚಿತಮ್ ॥ 1

ಅರ್ಜುನ: ಕೃಷ್ಣ! ಕರ್ಮಗಳ ತ್ಯಾಗವನ್ನು ಹೇಳುತ್ತಿ; ಫಲದಾಸೆ ಇಲ್ಲದೆ ಮಾಡೆಂದೂ ಹೇಳುತ್ತಿ. ಇವೆರಡರಲ್ಲಿ ಯಾವುದು ಮೇಲೋ ಆ ಒಂದನ್ನು ನನಗೆ ಗೊತ್ತುಮಾಡಿ ಹೇಳು.

ಶ್ರೀ ಭಗವಾನುವಾಚ –

ಸಂನ್ಯಾಸಃ ಕರ್ಮಯೋಗಶ್ಚ
ನಿಃಶ್ರೇಯಸಕರಾವುಭೌ।
ತಯೋಸ್ತು ಕರ್ಮಸನ್ನ್ಯಾಸಾತ್
ಕರ್ಮಯೋಗೋ ವಿಶಿಷ್ಯತೇ ॥ 2

ಶ್ರೀಕೃಷ್ಣ: ದ್ವಂದ್ವತ್ಯಾಗರೂಪವಾದ ಸಂನ್ಯಾಸವೂ ಫಲದಾಸೆ ಇಲ್ಲದೆ ಮಾಡುವುದೂ ಎರಡೂ ಮೋಕ್ಷಕ್ಕೆ ಸಾಧನೆಗಳೇ. ಅವೆರಡರಲ್ಲಿ ಕರ್ಮ ಸನ್ನ್ಯಾಸಕ್ಕಿಂತ ಫಲದಾಸೆ ಇಲ್ಲದೆ ಮಾಡುವುದು ಹೆಚ್ಚಿನದು.

ಜ್ಞೇಯಃ ಸ ನಿತ್ಯಸನ್ನ್ಯಾಸೀ
ಯೋ ನ ದ್ವೇಷ್ಟಿ ನ ಕಾಂಕ್ಷತಿ।
ನಿರ್ದ್ವಂದ್ವೋ ಹಿ ಮಹಾಬಾಹೋ
ಸುಖಂ ಬಂಧಾತ್ ಪ್ರಮುಚ್ಯತೇ ॥ 3

ಯಾರಿಗೆ (ವಿಷಯಗಳ ಮೇಲೆ) ಹಗೆತನವಾಗಲೀ ಆಸೆಯಾಗಲೀ ಇಲ್ಲವೋ ಅವನು ಯಾವಾಗಲೂ ಕರ್ಮಗಳನ್ನು ಬಿಟ್ಟವನೆಂದು ತಿಳಿಯಬೇಕು. ಏಕೆಂದರೆ, ಅರ್ಜುನ! ( ಹಗೆತನ, ಪ್ರೇಮ ಮೊದಲಾದ ) ದ್ವಂದ್ವಗಳಿಗೊಳಗಾಗದವನು ಕರ್ಮ ಬಂಧನದಿಂದ ಆಯಾಸವಿಲ್ಲದೆ ಬಿಡುಗಡೆಯನ್ನು ಹೊಂದುತ್ತಾನೆ.

ಸಾಂಖ್ಯಯೋಗೌ ಪೃಥಗ್ಬಾಲಾಃ
ಪ್ರವದಂತಿ ನ ಪಂಡಿತಾಃ।
ಏಕಮಪ್ಯಾಸ್ಥಿತಃ ಸಮ್ಯಕ್
ಉಭಯೋರ್ವಿಂದತೇ ಫಲಮ್ ॥ 4

ಜ್ಞಾನಮಾರ್ಗ–ಕರ್ಮಮಾರ್ಗಗಳು ಬೇರೆ ಬೇರೆ ಎಂಬುದು ತಿಳಿಯದವರ ಮಾತೇ ಹೊರತು ತಿಳಿದವರ ಮಾತಲ್ಲ. ಯಾವ ಒಂದನ್ನು ಚೆನ್ನಾಗಿ ನಡೆಸಿದರೂ ಅವನು ಎರಡರ ಫಲವನ್ನೂ ಪಡೆಯುತ್ತಾನೆ.

ಯತ್ ಸಾಂಖ್ಯೈಃ ಪ್ರಾಪ್ಯತೇ
ಸ್ಥಾನಂ ತದ್ಯೋಗೈರಪಿ ಗಮ್ಯತೇ।
ಏಕಂ ಸಾಂಖ್ಯಂ ಚ ಯೋಗಂ
ಚ ಯಃ ಪಶ್ಯತಿ ಸ ಪಶ್ಯತಿ ॥

ಜ್ಞಾನಯೋಗಿಗಳು ಯಾವ ಫಲವನ್ನು ಪಡೆಯುತ್ತಾರೋ ಕರ್ಮಯೋಗಿಗಳೂ ಜ್ಞಾನದ ಮೂಲಕ ಅದನ್ನು ಪಡೆಯುತ್ತಾರೆ. ಹೀಗೆ ಜ್ಞಾನಮಾರ್ಗ–ಕರ್ಮಮಾರ್ಗಗಳ ಗುರಿ ಒಂದೇ ಎಂದು ಯಾರು ತಿಳಿಯುವನೋ ಅವನೇ ನಿಜವಾದ ಜ್ಞಾನಿ.

ಸನ್ನ್ಯಾಸಸ್ತು ಮಹಾಬಾಹೋ
ದುಃಖಮಾಪ್ತುಮಯೋಗತಃ।
ಯೋಗಯುಕ್ತೋ ಮುನಿರ್ಬ್ರಹ್ಮ
ನಚಿರೇಣಾಧಿಗಚ್ಛತಿ ॥ 6

ಅರ್ಜುನ, ಕರ್ಮಯೋಗದ ನೆರವಿಲ್ಲದೆ ರಾಗ –



ದ್ವೇಷಗಳನ್ನು ಮೀರಿ ನಿಲ್ಲುವುದು ಕಷ್ಟ. ಫಲದಾಸೆ ಇಲ್ಲದೆ ಕರ್ಮ ಮಾಡುವ ದ್ವಂದ್ವಾತೀತನು ತಡವಿಲ್ಲದೆ ಆತ್ಮಜ್ಞಾನವನ್ನು ಹೊಂದುತ್ತಾನೆ.

ಯೋಗಯುಕ್ತೋ ವಿಶುದ್ಧಾತ್ಮಾ
ವಿಜಿತಾತ್ಮಾ ಜಿತೇಂದ್ರಿಯಃ।
ಸರ್ವಭೂತಾತ್ಮಭೂತಾತ್ಮಾ
ಕುರ್ವನ್ನಪಿ ನ ಲಿಪ್ಯತೇ ॥ 7

ಕರ್ಮಯೋಗದಲ್ಲಿ ನಿರತನಾಗಿ ಶುದ್ಧವಾದ ಮನಸ್ಸಿನಿಂದ ದೇಹವನ್ನು ಹಿಡಿತದಲ್ಲಿಟ್ಟುಕೊಂಡು ಇಂದ್ರಿಯಗಳನ್ನು ಬಿಗಿಹಿಡಿದು ಎಲ್ಲೆಡೆಯು ಅಂತರ್ಯಾಮಿಯಾಗಿರುವ ಭಗವಂತನನ್ನೆ ಸದಾ ನೆನೆಸುವವನು ಕರ್ಮ ಮಾಡಿದರೂ ಅದರ ಕಟ್ಟಿಗೊಳಗಾಗುವುದಿಲ್ಲ.

ನೈವ ಕಿಂಚಿತ್ಕರೋಮೀತಿ
ಯುಕ್ತೋ ಮನ್ಯೇತ ತತ್ತ್ವವಿತ್।
ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್
ಅಶ್ನನ್ ಗಚ್ಛನ್ ಸ್ವಪನ್ ಶ್ವಸನ್

ಪ್ರಲಪನ್ ವಿಸೃಜನ್ ಗೃಹ್ಣನ್
ಉನ್ಮಿಷನ್ನಿಮಿಷನ್ನಪಿ।
ಇಂದ್ರಿಯಾಣೀಂದ್ರಿಯಾರ್ಥೇಷು
ವರ್ತಂತ ಇತಿ ಧಾರಯನ್ ॥ 9

ಆತ್ಮಸ್ವರೂಪವನ್ನು ತಿಳಿದು ಮನಸ್ಸನ್ನು ಹಿಡಿತದಲ್ಲಿಟ್ಟುಕೊಂಡಿರುವವನು ನೋಡಿದರೂ, ಕೇಳಿದರೂ, ಮುಟ್ಟಿದರೂ, ಮೂಸಿದರೂ, ತಿಂದರೂ, ಹೋದರೂ, ನಿದ್ರೆಮಾಡಿದರೂ, ಉಸಿರುಬಿಟ್ಟರೂ, ಮಾತಾಡಿದರೂ, ಮಲಮೂತ್ರಗಳನ್ನು ಬಿಟ್ಟರೂ, ತೆಗೆದುಕೊಂಡರೂ, ಕಣ್ಣು ಬಿಟ್ಟರೂ, ಕಣ್ಣು ಮುಚ್ಚಿದರೂ, ಇಂದ್ರಿಯಗಳೊಡನೆ ವ್ಯವಹರಿಸುತ್ತಿರುವನೆಂದು ಮನಸ್ಸಿನಲ್ಲಿ ಎಣಿಸುತ್ತ ತಾನು ಏನನ್ನೂ ಮಾಡುವವನಲ್ಲವೆಂದು ತಿಳಿಯುವನು.

ಬ್ರಹ್ಮಣ್ಯಾಧಾಯ ಕರ್ಮಾಣಿ
ಸಂಗಂ ತ್ಯಕ್ತ್ವಾ ಕರೋತಿ ಯಃ।
ಲಿಪ್ಯತೇ ನ ಸ ಪಾಪೇನ
ಪದ್ಮಪತ್ರಮಿವಾಂಭಸಾ ॥ 10

ಯಾವನು ಕರ್ಮಗಳನ್ನೆಲ್ಲ ಈಶ್ವರನಿಗೊಪ್ಪಿಸಿ ಫಲದಾಸೆಯನ್ನು ಬಿಟ್ಟು ಮಾಡುವನೋ ಅವನು ನೀರನ್ನು ಕಮಲದೆಲೆ ಅಂಟಿಸಿಕೊಳ್ಳದಿರುವಂತೆ ಪಾಪಗಳನ್ನು ಅಂಟಿಸಿಕೊಳ್ಳುವುದಿಲ್ಲ.

ಕಾಯೇನ ಮನಸಾ ಬುದ್ಧ್ಯಾ
ಕೇವಲೈರಿಂದ್ರಿಯೈರಪಿ।
ಯೋಗಿನಃ ಕರ್ಮ ಕುರ್ವಂತಿ
ಸಂಗಂ ತ್ಯಕ್ತ್ವಾತ್ಮಶುದ್ಧಯೇ ॥ 11

ಕರ್ಮಯೋಗಿಗಳು ಫಲದಾಸೆ ಇಲ್ಲದೆ ಶರೀರ, ಮನಸ್ಸು ಬುದ್ಧಿ ಮತ್ತು ಇಂದ್ರಿಯಗಳಿಂದ ತಮ್ಮ ಮನಸ್ಸಿನ ಶುದ್ಧಿಗಾಗಿ ಕರ್ಮವನ್ನು ಮಾಡುತ್ತಾರೆ.

# ಕರ್ಮವನ್ನು ಬಿಡುವುದರ ವಿಚಾರ

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7–ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8–30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

ಯುಕ್ತಃ ಕರ್ಮಫಲಂ ತ್ಯಕ್ತ್ವಾ
ಶಾಂತಿಮಾಪ್ನೋತಿ ನೈಷ್ಠಿಕೀಮ್ ।
ಅಯುಕ್ತಃ ಕಾಮಕಾರೇಣ
ಫಲೇ ಸಕ್ತೋ ನಿಬಧ್ಯತೇ ॥ 12

ಕರ್ಮದ ಫಲವನ್ನು ತೊರೆದು ಈಶ್ವರನ ಪ್ರೀತಿಗಾಗಿ ಮಾಡುವವನು ಶಾಶ್ವತವಾದ ಶಾಂತಿಯನ್ನು ಪಡೆಯುತ್ತಾನೆ. ಬಯಕೆಗಳಿಗೆ ಬಲಿಯಾಗಿ ಫಲದಾಸೆಯಿಂದ ಕರ್ಮಮಾಡುವವನು ಬಾಳಿನ ಬಂಧನಕ್ಕೊಳಗಾಗುವನು.

ಸರ್ವಕರ್ಮಾಣಿ ಮನಸಾ
ಸನ್ನ್ಯಸ್ಯಾಸ್ತೇ ಸುಖಂ ವಶೀ ।
ನವದ್ವಾರೇ ಪುರೇ ದೇಹೀ
ನೈವ ಕುರ್ವನ್ನ ಕಾರಯನ್ ॥ 13

ಜ್ಞಾನಿಯು ದೇಹೇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಂಡು ತಾನು ಮಾಡುವವನಲ್ಲವೆಂಬ ಅನುಸಂಧಾನದಿಂದ ಒಂಭತ್ತು ಬಾಗಿಲು ಉಳ್ಳ (ದೇಹವೆಂಬ) ಪಟ್ಟಣದಲ್ಲಿ ಹಾಯಾಗಿರುವನು. ಅವನು ಮಾಡಿದರೂ ಮಾಡಿದಂತಲ್ಲ; ಮಾಡಿಸಿದರೂ ಮಾಡಿಸಿದಂತಲ್ಲ.

ನ ಕರ್ತೃತ್ವಂ ನ ಕರ್ಮಾಣಿ
ಲೋಕಸ್ಯ ಸೃಜತಿ ಪ್ರಭುಃ ।
ನ ಕರ್ಮಫಲಸಂಯೋಗಂ
ಸ್ವಭಾವಸ್ತು ಪ್ರವರ್ತತೇ ॥ 14

ಜಗತ್ತಿನಲ್ಲಿ ಮಾಡುವಿಕೆ, ಮಾಡಿದ ಕ್ರಿಯೆ ಮತ್ತು ಕ್ರಿಯೆಗೆ ತಕ್ಕ ಪ್ರತಿಫಲ ಇವು ಯಾವುದನ್ನು ಆತ್ಮನು ನಿರ್ಮಿಸಲಾರ. ಎಲ್ಲವೂ ಸ್ವಭಾವಕ್ಕೆ ತಕ್ಕಂತೆ ಭಗವಂತನ ಇಚ್ಛೆಯಂತೆ ನಡೆದಿದೆ.

ನಾದತ್ತೇ ಕಸ್ಯಚಿತ್ಪಾಪಂ
ನ ಚೈವ ಸುಕೃತಂ ವಿಭುಃ ।
ಅಜ್ಞಾನೇನಾವೃತಂ ಜ್ಞಾನಂ
ತೇನ ಮುಹ್ಯಂತಿ ಜಂತವಃ ॥ 15

ಎಲ್ಲೆಲ್ಲಿಯೂ ತುಂಬಿರುವ ಭಗವಂತ ಯಾರ ಪಾಪ ಪುಣ್ಯಗಳಿಗೂ ತಾನು ಭಾಗಿಯಲ್ಲ. ಅರಿವನ್ನು ಅಜ್ಞಾನದ ತೆರೆ ಮುಚ್ಚಿದೆ. ಅದರಿಂದ ಜನ ಭ್ರಮಿಸುತ್ತಾರೆ, ಅಷ್ಟೆ.

ಜ್ಞಾನೇನ ತು ತದಜ್ಞಾನಂ
ಯೇಷಾಂ ನಾಶಿತಮಾತ್ಮನಃ ।
ತೇಷಾಮಾದಿತ್ಯವಜ್ಜ್ಞಾನಂ
ಪ್ರಕಾಶಯತಿ ತತ್ಪರಮ್ ॥ 16

ಆತ್ಮದ ಅರಿವಿನ ಬೆಳಕಿನಿಂದ ಅಜ್ಞಾನದ ಕತ್ತಲನ್ನು ಕಳೆದುಕೊಂಡವರಿಗೆ ಅವರ ಆ ಅರಿವೇ ಸೂರ್ಯನಂತೆ ಆ ಪರತತ್ತ್ವವನ್ನು ಬೆಳಗಿಸುತ್ತದೆ.

ತದ್ಬುದ್ಧಯಸ್ತದಾತ್ಮಾನಃ
ತನ್ನಿಷ್ಠಾಸ್ತತ್ಪರಾಯಣಾಃ ।
ಗಚ್ಛಂತ್ಯಪುನರಾವೃತ್ತಿಂ
ಜ್ಞಾನನಿರ್ಧೂತಕಲ್ಮಷಾಃ ॥ 17

ಭಗವಂತನಲ್ಲಿ ಬುದ್ಧಿ ನೆಲೆಗೊಳ್ಳಬೇಕು; ಬಾಳು ಅವನಿಗೆ ಅರ್ಪಿತವಾಗಬೇಕು. ಅವನೇ ಜೀವದ ಗುರಿ – ನೆಲೆಯಾಗಬೇಕು. ಇಂಥ ಅರಿವಿನಿಂದ ಪಾಪದ ಕೊಳೆಯನ್ನು ತೊಳೆದು ಕೊಂಡುವವರು ಮತ್ತೆ ಮರಳದ ಶಾಶ್ವತ ಪದವನ್ನು ಪಡೆಯುವರು.

ವಿದ್ಯಾವಿನಯಸಂಪನ್ನೇ
ಬ್ರಾಹ್ಮಣೇ ಗವಿ ಹಸ್ತಿನಿ ।
ಶುನಿಚೈವ ಶ್ವಪಾಕೇ ಚ
ಪಂಡಿತಾಃ ಸಮದರ್ಶಿನಃ ॥ 18

ವಿದ್ಯೆ – ವಿನಯಗಳ ನೆಲೆಯಾದ ಬ್ರಹ್ಮ ಜ್ಞಾನಿ, ಹಸು, ಆನೆ, ನಾಯಿ, ನಾಯಮಾಂಸ ತಿಂದು ಬದುಕುವ ಅನಾಗರಿಕ–ಈ ಎಲ್ಲರಲ್ಲಿಯೂ ಒಬ್ಬನೇ ಭಗವಂತ ನೆಲೆಸಿದ್ದಾನೆ. ಅವನಿಗೆ ಕೀಳು ಮೇಲೆಂಬುದಿಲ್ಲ ಎಂದು ಜ್ಞಾನಿಗಳು ತಿಳಿಯುತ್ತಾರೆ.

ಇಹೈವ ತೈರ್ಜಿತಸ್ಸರ್ಗೋ
ಯೇಷಾಂ ಸಾಮ್ಯೇ ಸ್ಥಿತಂ ಮನಃ ।
ನಿರ್ದೋಷಂ ಹಿ ಸಮಂ ಬ್ರಹ್ಮ
ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ ॥ 19

ಯಾರ ಮನಸ್ಸು ಎಲ್ಲ ಕಡೆಯಲ್ಲಿಯೂ ಏಕರೀತಿಯಲ್ಲಿರುವ ಬ್ರಹ್ಮನಲ್ಲಿರುವುದೋ ಅವರು ಇಲ್ಲಿಯೇ ಹುಟ್ಟನ್ನು ಗೆದ್ದವರಾಗಿರುವರು. ಎಲ್ಲರಲ್ಲಿಯೂ ಏಕರೂಪವಾಗಿರುವ ಬ್ರಹ್ಮವು ಯಾವ ದೋಷವೂ ಇಲ್ಲದ್ದು. ಆದ್ದರಿಂದ ಅವರು (ಇಂಥ ಬ್ರಹ್ಮಸ್ವರೂಪವನ್ನು ತಿಳಿದವರು) ಬ್ರಹ್ಮ ಸ್ವರೂಪದಲ್ಲಿಯೇ ಇರುವವರಾಗಿದ್ದಾರೆ.

ನ ಪ್ರಹೃಷ್ಯೇತ್ ಪ್ರಿಯಂ ಪ್ರಾಪ್ಯ
ನೋದ್ವಿಜೇತ್ಪ್ರಾಪ್ಯ ಚಾಪ್ರಿಯಮ್ ।
ಸ್ಥಿರಬುದ್ಧಿರಸಮ್ಮೂಢೋ
ಬ್ರಹ್ಮವಿದ್ಬ್ರಹ್ಮಣಿ ಸ್ಥಿತಃ ॥ 20

ನೆಲೆಗೊಂಡ ಬುದ್ಧಿಯವನೂ, ಭ್ರಾಂತಿಗೊಳ್ಳದವನೂ ಬ್ರಹ್ಮವನ್ನು ತಿಳಿದವನೂ ಬ್ರಹ್ಮದಲ್ಲಿಯೇ ಮನಸ್ಸು ಉಳ್ಳವನೂ ಆದವನು ತನಗೆ ಬೇಕೆನಿಸಿದ್ದು ದೊರಕಿತೆಂದು ಉಬ್ಬುವುದಿಲ್ಲ; ಬೇಡವೆನಿಸಿದ್ದು ಬಂದು ಗಂಟುಬಿದ್ದಿತೆಂದು ತಳಮಳಿಸುವುದೂ ಇಲ್ಲ.

ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ
ವಿಂದತ್ಯಾತ್ಮನಿ ಯತ್ಸುಖಮ್ ।
ಸ ಬ್ರಹ್ಮಯೋಗಯುಕ್ತಾತ್ಮಾ
ಸುಖಮಕ್ಷಯಮಶ್ನುತೇ ॥ 21

ಹೊರಗಣ ವಿಷಯಗಳಿಗೆ ಮನಸೋಲದವನು ತನ್ನೊಳಗೆಯೇ ಯಾವ ಸುಖವನ್ನು ಪಡೆಯುವನೋ ಅದೇ ಸುಖವನ್ನು ಬ್ರಹ್ಮತ್ವದಲ್ಲಿ ಮನಸ್ಸನ್ನು ನೆಲೆಗೊಳಿಸಿದವನು ಅನಂತವಾಗಿ ಪಡೆಯುತ್ತಾನೆ.



ಯೇ ಹಿ ಸಂಸ್ಪರ್ಶಜಾ ಭೋಗಾ
ದುಃಖಯೋನಯ ಏವ ತೇ ।
ಆದ್ಯಂತವಂತಃ ಕೌಂತೇಯ
ನ ತೇಷು ರಮತೇ ಬುಧಃ ॥ 22

ವಿಷಯಗಳ ಸಂಬಂಧದಿಂದಾಗುವ ಸುಖಗಳೆಲ್ಲ ದುಃಖಕ್ಕೆ ಮೂಲವಾದುವುಗಳೇ. ಅರ್ಜುನ! ಅವು ಮೊದಲೂ ಕೊನೆಯೂ ಉಳ್ಳವುಗಳು. ವಿವೇಕಿಯು ಅವುಗಳಲ್ಲಿ ಪ್ರೀತಿಯನ್ನಿಡುವುದಿಲ್ಲ.

ಶಕ್ನೋತೀಹೈವ ಯಸ್ಸೋಢುಂ
ಪ್ರಾಕ್ ಶರೀರವಿಮೋಕ್ಷಣಾತ್ ।
ಕಾಮಕ್ರೋಧೋದ್ಭವಂ ವೇಗಂ
ಸ ಯುಕ್ತಃ ಸ ಸುಖೀ ನರಃ ॥ 23

ಸಾಯುವ ಮುಂಚೆಯೇ ಬಯಕೆ ಸಿಟ್ಟು ಮೊದಲಾದವುಗಳ ಸೆಳೆತವನ್ನು ಈ ಲೋಕದಲ್ಲಿಯೇ ತಡೆಯಬಲ್ಲವನೇ ನಿಜವಾದ ಯೋಗಿ; ಅವನೇ ನಿಜವಾದ ಸುಖಿ.

ಯೋಽಂತಸ್ಸುಖೋಽಂತರಾರಾಮಃ
ತಥಾಂತರ್ಜ್ಯೋತಿರೇವ ಯಃ ।
ಸ ಯೋಗೀ ಬ್ರಹ್ಮ ನಿರ್ವಾಣಂ
ಬ್ರಹ್ಮಭೂತೋಽಧಿಗಚ್ಛತಿ ॥ 24

ಯಾವನು ಒಳಗೇ ಆತ್ಮ ಸುಖದಲ್ಲಿ ಲೀನನಾಗಿ ಭಗವಂತನ ದರ್ಶನದಿಂದ ಆನಂದಗೊಳ್ಳುತ್ತ, ಒಳಗೆ ಆ ಬೆಳಕನ್ನೆ ತುಂಬಿಕೊಂಡಿರುವನೋ, ಬ್ರಹ್ಮನಲ್ಲಿಯೇ ನೆಲೆಗೊಂಡ ಆ ಯೋಗಿಯು ಆನಂದರೂಪಿಯಾದ ಬ್ರಹ್ಮವನ್ನೇ ಪಡೆಯುತ್ತಾನೆ.

ಲಭಂತೇ ಬ್ರಹ್ಮ ನಿರ್ವಾಣಂ
ಋಷಯಃ ಕ್ಷೀಣಕಲ್ಮಷಾಃ ।
ಛಿನ್ನದ್ವೈಧಾ ಯತಾತ್ಮಾನಃ
ಸರ್ವಭೂತಹಿತೇ ರತಾಃ ॥ 25

ಪಾಪಗಳನ್ನು ತೊಳೆದುಕೊಂಡು, ಸಂಶಯ ವಿಪರೀತ ಜ್ಞಾನಗಳನ್ನು ಕಳೆದುಕೊಂಡು, ದೇಹವನ್ನೂ ಇಂದ್ರಿಯಗಳನ್ನೂ ನಿಗ್ರಹಿಸಿ, ಎಲ್ಲ ಪ್ರಾಣಿಗಳಿಗೂ ಒಳಿತನ್ನು ಬಯಸಿ ಬದುಕುವವರು ಆನಂದ ರೂಪವಾದ ಬ್ರಹ್ಮತತ್ತ್ವವನ್ನು ಪಡೆಯುತ್ತಾರೆ.

ಕಾಮಕ್ರೋಧವಿಯುಕ್ತಾನಾಂ
ಯತೀನಾಂ ಯತಚೇತಸಾಮ್ ।
ಅಭಿತೋ ಬ್ರಹ್ಮ ನಿರ್ವಾಣಂ
ವರ್ತತೇ ವಿದಿತಾತ್ಮನಾಮ್ ॥ 26

ಬಯಕೆ ಸಿಟ್ಟುಗಳನ್ನು ತೊರೆದು ಮನಸ್ಸನ್ನು ಬಿಗಿಹಿಡಿದು ಆತ್ಮವನ್ನರಿತ ಸನ್ಯಾಸಿಗಳಿಗೆ ಎಲ್ಲೆಡೆಯು ಆನಂದ ರೂಪವಾದ ಬ್ರಹ್ಮವೇ ತುಂಬಿದೆ.

ಸ್ಪರ್ಶಾನ್ಕೃತ್ವಾ ಬಹಿರ್ಬಾಹ್ಯಾನ್
ಚಕ್ಷುಶ್ಚೈವಾಂತರೇ ಭ್ರುವೋಃ ।
ಪ್ರಾಣಾಪಾನೌ ಸಮೌ ಕೃತ್ವಾ
ನಾಸಾಭ್ಯಂತರಚಾರಿಣೌ ॥ 27

ಯತೇಂದ್ರಿಯಮನೋಬುದ್ಧಿಃ
ಮುನಿರ್ಮೋಕ್ಷಪರಾಯಣಃ ।
ವಿಗತೇಚ್ಛಾಭಯಕ್ರೋಧೋ
ಯಃ ಸದಾ ಮುಕ್ತ ಏವ ಸಃ ॥ 28

ಹೊರಗಣ ವಿಷಯಗಳನ್ನು ಬಹಿಷ್ಕರಿಸಿ, ಕಣ್ಣನ್ನು ಹುಬ್ಬುಗಳ ನಡುವೆ ನೆಲೆಗೊಳಿಸಿ ಮೂಗಿನೊಳಗೆ ಓಡಾಡುವ ಉಸಿರನ್ನು ಕುಂಭಕದಲ್ಲಿ ಬಿಗಿ ಹಿಡಿದು, ಇಂದ್ರಿಯ, ಮನಸ್ಸು ಬುದ್ಧಿ – ಇವುಗಳನ್ನು ಹಿಡಿತದಲ್ಲಿಟ್ಟುಕೊಂಡು, ಬಯಕೆ, ಭಯ ಕೋಪಗಳನು ತೊರೆದು, ಭವದ ಬಿಡುಗಡೆಯನ್ನು ಬಯಸುವ ಮುನಿ ಯಾವಾಗಲೂ ಮುಕ್ತನೇ.

ಭೋಕ್ತಾರಂ ಯಜ್ಞತಪಸಾಂ
ಸರ್ವಲೋಕಮಹೇಶ್ವರಮ್ ।
ಸುಹೃದಂ ಸರ್ವಭೂತಾನಾಂ
ಜ್ಞಾತ್ವಾ ಮಾಂ ಶಾಂತಿಮೃಚ್ಛತಿ ॥ 29

ನನ್ನನ್ನು ಯಜ್ಞದ ಮತ್ತು ತಪಸ್ಸಿನ ಫಲವನ್ನು ಉಣ್ಣುವವನೆಂದೂ ಎಲ್ಲ ಲೋಕಗಳಿಗೂ ಒಡೆಯನೆಂದೂ ಎಲ್ಲ ಪ್ರಾಣಿಗಳಿಗೂ ಗೆಳೆಯನೆಂದೂ ತಿಳಿದವನಿಗೆ ಮುಕ್ತಿ ಕೈಯಗಂಟು.

5 ನೆಯ ಅಧ್ಯಾಯವು ಮುಗಿದುದು.

**ಇತಿ**

ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಜ್ಞಾನಕರ್ಮಸನ್ಯಾಸಯೋಗೋನಾಮ ಪಂಚಮೋಽಧ್ಯಾಯಃ ॥

# ಅಭಯಪ್ರದಾನ

ಅಭಯಪ್ರದಾನವೆಂದರೆ ಭಯವನ್ನು ಹೋಗಲಾಡಿಸಿ ರಕ್ಷಿಸುವುದು ಎಂದು ಅರ್ಥ. ಭಯ ಯಾರಿಗೆ? ರಕ್ಷಿಸುವವರು ಯಾರು? ಯಾತಕ್ಕಾಗಿ ರಕ್ಷಿಸಬೇಕು ಮುಂತಾದ ಪ್ರಶ್ನೆಗಳು ಸಹಜವಾಗಿ ಹುಟ್ಟುವುವು. ಸಂಸಾರದಲ್ಲಿ ಸಿಲುಕಿ ಸುಖದುಃಖ ಸಂಕಟಗಳನ್ನು ಅನುಭವಿಸುವ ಮಾನವರಿಗೆ ಪಾಪ ಭಯ ಇದ್ದೇ ಇರುತ್ತದೆ. 'ಸಂಸಾರ ಸಾಗರಂ ಘೋರಂ ಅನಂತಕ್ಲೇಶಭಾಜನಂ' ಎಂದು ಹಿರಿಯರು ಹೇಳಿದ್ದಾರೆ. ಸಂಸಾರದಲ್ಲಿ ಇರುವವರೆಗೆ ಅನಂತವಾದ ಕ್ಲೇಶಗಳು ಸಹಜವಾಗಿ ಬರುತ್ತವೆ. ಇಂತಹ ಕ್ಲೇಶಗಳನ್ನು ಹೋಗಲಾಡಿಸಿ ಶಾಶ್ವತವಾದ ಆನಂದವನ್ನು ಕರುಣಿಸುವುದಕ್ಕೆ ಶ್ರೀಮನ್ನಾರಾಯಣನಿಂದ ಮಾತ್ರ ಸಾಧ್ಯ. ಅಂದರೆ ಪರಮಾತ್ಮನಲ್ಲಿ ಶರಣಾಗತಿ ಮಾಡಬೇಕು. ಇಂತಹ ಪ್ರಾರ್ಥನೆಯಿಂದ ಪ್ರೀತನಾದ ಸ್ವಾಮಿಯು ಮೋಕ್ಷವನ್ನು ಅನುಗ್ರಹಿಸುವನು. ಹೀಗೆ ಪರಮಾತ್ಮನು ಅಭಯಪ್ರದಾನ ಮಾಡಿದ ಅನೇಕ ಸಂದರ್ಭಗಳನ್ನು ರಾಮಾಯಣದ ಹಿನ್ನೆಲೆಯಲ್ಲಿ ವಿಚಾರಮಾಡುವುದು ಪ್ರಸ್ತುತ ಉದ್ದೇಶ.

ಶ್ರೀಮದ್ರಾಮಾಯಣವು ಶರಣಾಗತಿ ಸಿದ್ಧಾಂತ ಸ್ಥಾಪನೆಯ ಮಹಾಗ್ರಂಥ. ಹೀಗೆ ಶರಣಾಗತಿ ಮಾಡಿದವರಿಗೆಲ್ಲ ಅಭಯಪ್ರದಾನವಾಗಿದೆ. ಬಾಲಕಾಂಡದಲ್ಲಿ ದೇವತೆಗಳು ಪರಮಾತ್ಮನಲ್ಲಿ ಮಾಡಿದ ಶರಣಾಗತಿ, ಅಯೋಧ್ಯಾಕಾಂಡದಲ್ಲಿ ದಂಡಕಾರಣ್ಯದ ಋಷಿಗಳು ಶ್ರೀರಾಮನಲ್ಲಿ ಮಾಡಿದ ಶರಣಾಗತಿ, ಕಿಷ್ಕಿಂಧಾಕಾಂಡದಲ್ಲಿ ಸುಗ್ರೀವನು ಮಾಡಿದ ಶರಣಾಗತಿ, ಯುದ್ಧಕಾಂಡದಲ್ಲಿ ವಿಭೀಷಣನು ಮಾಡಿದ ಶರಣಾಗತಿ–ಇವುಗಳೆಲ್ಲದರ ಫಲವಾಗಿ ಆಯಾಯಾ ಸಂದರ್ಭಕ್ಕೆ ತಕ್ಕಂತೆ ಅಭಯಪ್ರದಾನವಾಗಿದೆ 'ರಾಮೋ ವಿಗ್ರಹವಾನ್ ಧರ್ಮಃ' ಎಂಬಂತೆ ಧರ್ಮಸ್ವರೂಪಿಯಾದ ಶ್ರೀರಾಮಚಂದ್ರನು ಅವರೆಲ್ಲರಿಗೂ ಅಭಯಪ್ರದಾನ ಮಾಡಿದ್ದಾನೆ.

ಇವುಗಳಲ್ಲಿ ವಿಭೀಷಣನ ಶರಣಾಗತಿ ಸರ್ವೋತ್ತಮ ರೀತಿಯದು. ಇಲ್ಲಿ ಶ್ರೀರಾಮನು ಮಾಡಿರುವ ಅಭಯಪ್ರದಾನ ವಿಶೇಷ ರೀತಿಯ ಲಕ್ಷಣದಿಂದ ಕೂಡಿದೆ. ಈ ಕಥಾಸಂದರ್ಭ ಹೀಗಿದೆ– ವಿಭೀಷಣ ಧರ್ಮಾತ್ಮ, ಮಹಾಭಕ್ತ. ಈತ ಬ್ರಹ್ಮದೇವನನ್ನು ಕುರಿತು ತಪಸ್ಸು ಮಾಡಿದಾಗಲೇ 'ತಾನು ಅಧರ್ಮಿ ಆಗಬಾರದೆಂದೂ, ಧರ್ಮಬುದ್ಧಿಯುಳ್ಳವನಾಗಿರಬೇಕೆಂದೂ' ವರ ಪಡೆದಿದ್ದಾನೆ. ಅಂತಹವನು ತನ್ನ ಅಣ್ಣನ ಅಧರ್ಮವನ್ನು ಸಹಿಸುವನೇ? ರಾವಣನು ಸೀತಾದೇವಿಯನ್ನು ಅಪಹರಿಸಿಕೊಂಡು ಬಂದದ್ದು ಅಧರ್ಮ, ಮಹಾಪಾಪ. ಪರಮಾತ್ಮ ಸ್ವರೂಪಿಯಾದ ಶ್ರೀರಾಮನು ಸೈನ್ಯ ಸಮೇತ ರಾಕ್ಷಸಕುಲವನ್ನು ನಾಶಮಾಡಲು ಹೊರಟಿದ್ದಾನೆ. ಅದ್ದರಿಂದ ತಾನು ಮಾಡಿರುವ ಅಧರ್ಮಕ್ಕೆ ಪಶ್ಚಾತ್ತಾಪ ಪಟ್ಟು ಸೀತಾದೇವಿಯನ್ನು ರಾಮನಿಗೆ ಒಪ್ಪಿಸಿ ತನ್ನನ್ನೂ ರಾಕ್ಷಸ ಕುಲವನ್ನೂ ರಕ್ಷಿಸಿಕೊಳ್ಳಬೇಕು ಎಂದು ಸಲಹೆ ನೀಡುತ್ತಾನೆ. ದುಷ್ಟನಾದ ರಾವಣನಿಗೆ ಇದು ಹಿಡಿಸಲಿಲ್ಲ. ರಾವಣನು ತಮ್ಮನಾದ ವಿಭೀಷಣನನ್ನು ಹೀಯಾಳಿಸಿ ಕೆಟ್ಟ ಮಾತುಗಳನ್ನಾಡಿ ಅವಮಾನಗೊಳಿಸುವನು.

ಆಗ ವಿಭೀಷಣನು ರಾವಣನ ಅಧರ್ಮಕಾರ್ಯದಲ್ಲಿ ಭಾಗಿಯಾಗಲು ಇಷ್ಟಪಡದೆ, ಹಾಗೆ ಮಾಡುವುದು ಪಾಪವೆಂದು ತಿಳಿದು ತನ್ನ ನಾಲ್ವರು ಮಂತ್ರಿಗಳೊಡನೆ ಶ್ರೀರಾಮನ ಬಳಿಗೆ ಬರಲು ಪ್ರಯತ್ನಿಸಿ ಆಕಾಶದಲ್ಲಿ ನಿಂತು ಆರ್ತಧ್ವನಿಯಿಂದ ಕೂಗಿಕೊಳ್ಳುವನು:

ಸರ್ವಲೋಕ ಶರಣ್ಯಾಯ<br>
ರಾಘವಾಯ ಮಹಾತ್ಮನೇ ।<br>
ನಿವೇದಯತ ಮಾಂ ಕ್ಷಿಪ್ರಂ<br>
ವಿಭೀಷಣಮುಪಸ್ಥಿತಮ್ ॥

– ಸರ್ವಲೋಕ ರಕ್ಷಕನಾದ ಮಹಾತ್ಮನಾದ ಶ್ರೀರಾಮನ ಶರಣು ಹೊಂದಲು ಬಂದಿರುವ ವಿಭೀಷಣನೆಂಬ ತನ್ನನ್ನು ಸಮರ್ಪಿಸಿರಿ ಎಂದು ಅಂತರಂಗ ಭಕ್ತರಾದ ಸುಗ್ರೀವಾದಿಗಳನ್ನು ಮುಂದಿಟ್ಟುಕೊಂಡು ವಿಭೀಷಣನು ಶರಣಾಗತಿ ಮಾಡುವನು.

ವಿಭೀಷಣನು ತನ್ನ ಶ್ರೇಷ್ಠಕುಲವನ್ನು ಮಹದೈಶ್ವರ್ಯವನ್ನು ಪುತ್ರದಾರಾದಿಗಳನ್ನು ಬಿಟ್ಟು ಶ್ರೀರಾಮನಲ್ಲಿ ಪ್ರಾತಿಕೂಲ್ಯವನ್ನು ಆಚರಿಸದೆ ಇದ್ದದ್ದರಿಂದ ಇಲ್ಲಿ ಆನುಕೂಲ್ಯ ಸಂಕಲ್ಪವೂ ಪ್ರಾತಿಕೂಲ್ಯ ವರ್ಜನವೂ ಸೂಚಿತವಾಯಿತು. ಶ್ರೀರಾಮನು ಸರ್ವಲೋಕ ಶರಣ್ಯನು ಎಂಬ ದೃಢ ನಿರ್ಧಾರದಿಂದ ತಾನು ಹೆದರಬೇಕಾದ ಸ್ಥಳದಲ್ಲಿ ಯಾವ ಅನುಮಾನವೂ ಇಲ್ಲದ ಹಾಗೆ ನಿರ್ಭಯವಾಗಿ ಶ್ರೀರಾಮನಿದ್ದ ಸ್ಥಳವೇ ತನಗೆ ಮುಖ್ಯಸ್ಥಳ ಭಾವಿಸಿ ಬಂದದ್ದರಿಂದ ರಕ್ಷಣೆಯ ಬಗ್ಗೆ ವಿಶ್ವಾಸವು ತೋರಲ್ಪಟ್ಟಿತು. ಶ್ರೀರಾಮನನ್ನು ಶರಣು ಹೊಕ್ಕೆನೆಂಬ ಉಪಾಯವರಣಪರವಾದ ವಾಕ್ಯದಿಂದ ಗೋಪ್ತೃತ್ವವರಣವು ಸೂಚಿತವಾಯಿತು. ಉಪಾಯಾಂತರ ಸ್ಥಾನ ನಿರ್ದೇಶಪರವಾದ ಶರಣ್ಯಶಬ್ದದಿಂದ ಅರ್ಥಿಕವಾಗಿ ತೋರಿಸುವ ರಕ್ಷಾಭರ ಸಮರ್ಪಣೆಗಳೂ ಪ್ರಧಾನವಾದ ಆತ್ಮನಿಕ್ಷೇಪ ಎರಡೂ ಸೂಚಿತವಾಯಿತು. ಶ್ರೀರಾಮನಿಗೆ ಶರಣು ಬಂದಿರುವ ವಿಭೀಷಣನನ್ನು ಸಮರ್ಪಿಸಿರಿ ಎಂಬ ಅರ್ಥವುಳ್ಳ ವಚನದಿಂದ ಅಂತರಂಗಭಕ್ತರಾದ ಸುಗ್ರೀವಾದಿಗಳನ್ನು ಮುಂದಿಟ್ಟುಕೊಂಡು ವಿಭೀಷಣನು ಶರಣು ಹೊಂದಿದನು ಎಂಬುದು ವ್ಯಕ್ತವಾಯಿತು.

'ನಿವೇದಯತ ಮಾಂ ಕ್ಷಿಪ್ರಂ' ಎಂಬಲ್ಲಿ ಶ್ರೀರಾಮನೂ ಲಕ್ಷ್ಮಣನೂ ಸುಗ್ರೀವಾದಿಗಳೂ ಕೇಳುವಂತೆ ವಿಭೀಷಣನು ಸಮೀಪಕ್ಕೆ ಬಂದು ಗಟ್ಟಿಯಾಗಿ ಹೇಳಿದ ಮಾತಿಗೆ ತಾನು ಬಂದಿರುವುದಾಗಿ ಶ್ರೀರಾಮಚಂದ್ರನಿಗೆ ಜಾಗ್ರತೆ ತಿಳಿಯಪಡಿಸಿ ಎಂಬ ಅರ್ಥವು ವಿವಕ್ಷಿತವಲ್ಲ. 'ಸಖ್ಯಮಾತ್ಮನಿವೇದನಂ', 'ಕಿಂಕರೋಽಸ್ಮೀತಿ ಚಾತ್ಮಾನಂ', 'ದೇವಾಯೈವಂ ನಿವೇದಯೇತ್' ಎಂದು ಹೇಳಿರುವಂತೆ ತನ್ನನ್ನು ಕಿಂಕರನಾಗಿ ಸಮರ್ಪಿಸಿರಿ ಎಂಬುದೇ ಭಾವಾರ್ಥ.

ವಿಭೀಷಣನು ಹೇಳಿರುವ ವಚನದಿಂದ ದುಷ್ಟಪ್ರಕೃತಿಯಾದ ರಾವಣನಿಗೆ ಹಿತೋಪದೇಶಮಾಡಿ ಮರುಭೂಮಿಗೆ ನೀರು ಹಾಕಿದಂತೆ ನಿಷ್ಪ್ರಯೋಜನವಾಯಿತೆಂದು ಹೇಳಿದನೆಂದೂ, 'ಸರ್ವೇಣ ಮಹತಾ ಮಹಾನ್' ಎಂಬ ಆರ್ತಸ್ವರದಿಂದ ಕೂಗಿದನೆಂದೂ, 'ಕ್ಷಿಪ್ರಂ' ಎಂಬುದರಿಂದ ತ್ವರಿತವಾಗಲೆಂಬ ಆಶಯವೂ ಸೂಚಿತವಾಯಿತು. 'ಪ್ರಸಾದಪ್ಯ ಮಹಾನೇಷಃ ತತೋಽಸ್ಯಭಯಮಾಗತಃ' ಎಂದು ಸರ್ವಜ್ಞನಾಗಿಯೂ ಸರ್ವಶರಣ್ಯನಾಗಿಯೂ ಇರುವ ಶ್ರೀರಾಮಚಂದ್ರನ ವಚನದಿಂದ ಕಾರ್ಪಣ್ಯವೂ ವ್ಯಕ್ತವಾಯಿತು.

'ಎಲೈ ಶ್ರೀರಾಮನೇ! ಲಂಕೆಯನ್ನು ಮುತ್ತಿಗೆ ಹಾಕುವುದರಲ್ಲಿ ರಾಕ್ಷಸರ ವಧೆಯಲ್ಲಿ ನನ್ನ ಪ್ರಾಣವಿರುವವರೆಗೂ ಸಹಾಯ ಮಾಡುವೆನು, ಸೇನೆಯನ್ನು ಪ್ರವೇಶಿಸುವೆನು' ಎಂದು ವಿಭೀಷಣನು ಹೇಳಿದುದಲ್ಲದೆ, ಸರ್ವನಿರಪೇಕ್ಷ ಆಂಜನೇಯನಂತೆ ಸಮಯಾನುಸಾರ ಸೇವೆಮಾಡುವೆನೆಂದು ವಿಜ್ಞಾಪಿಸುವನೆಂದೂ ವ್ಯಕ್ತವಾಗುತ್ತದೆ.

'ಶ್ರೀರಾಮನು ಸರ್ವಥಾ ವಿಭೀಷಣನನ್ನು ಪರಿಗ್ರಹಿಸಲಾಗದು. ಅವನು ರಾಕ್ಷಸ, ಶತ್ರುಪಕ್ಷದವನು, ರಾವಣನ ತಮ್ಮನು. ಯಾವುದೋ ದುರುದ್ದೇಶದಿಂದ ಶತ್ರುಪಕ್ಷದಿಂದ ಬಂದಿರಬಹುದು' ಎಂದು ಸುಗ್ರೀವನು ಹೇಳುವನು. ಇತರ ವಾನರ

ಶ್ರೀ ಡಿ. ಕೃಷ್ಣ ಅಯ್ಯಂಗಾರ್

ವೀರರು ತಮ್ಮ ಅಭಿಪ್ರಾಯಗಳನ್ನು ಹೇಳಿರಿ ಎಂದು ಶ್ರೀರಾಮ ಹೇಳಿದಾಗ ಅವರೆಲ್ಲರೂ ಉತ್ತರರೂಪವಾಗಿ ಉಪಚಾರಪೂರ್ವಕ ಪ್ರಶಂಸಾ ವಾಕ್ಯಗಳನ್ನು ಹೇಳಿ ವಿಭೀಷಣನು ಅಂಗೀಕಾರಾರ್ಹನಲ್ಲವೆಂದು ಅಭಿಪ್ರಾಯಪಡುವರು. ಅನಂತರ ಸನ್ಮಂತ್ರಿಯಾದ ಆಂಜನೇಯನನ್ನು ಶ್ರೀರಾಮನು ಕೇಳುವನು. ಆಂಜನೇಯನು 'ವಿಭೀಷಣನು ಧರ್ಮಾತ್ಮ, ನಿರ್ದೋಷಿ, ಅವನನ್ನು ಅಂಗೀಕರಿಸುವುದು ಯುಕ್ತವಾಗಿದೆ. ಜಾಂಬವಾದಿಗಳು ಹೇಳಿರುವ ಕಾರಣಗಳು ಸರಿಯಲ್ಲ' ಎನ್ನುವನು. ಆಗ ಶ್ರೀರಾಮನು, ಶರಣಾಗತನ ವಿಷಯದಲ್ಲಿ ಅನೇಕರು ಸಂದೇಹ ವ್ಯಕ್ತಪಡಿಸಿದರೂ ಗುಣವನ್ನು ಹೇಳುವವನು ಇದ್ದಾನಲ್ಲಾ ಎಂಬ ಸಂತಸದಿಂದ ತನ್ನ ಅಚಲಿತವಾದ ಅಭಿಪ್ರಾಯವನ್ನು ವ್ಯಕ್ತಪಡಿಸುವನು.

ಮಿತ್ರಭಾವೇನ ಸಂಪ್ರಾಪ್ತಂ
ನ ತ್ಯಜೇಯಂ ಕಥಂಚನ ।
ದೋಷೋ ಯದ್ಯಪಿ ತಸ್ಯ ಸ್ಯಾ
ತ್ಸತಾಮೇತದಗರ್ಹಿತಮ್ ॥

—ಮಿತ್ರಭಾವದಿಂದ ಶರಣಾಗತನಾಗಿ ಬಂದಿದ್ದಾನೆ. ಸಂಪ್ರಾಪ್ತಂ—ಸಮ್ಯಕ್‌ಪ್ರಾಪ್ತಂ ಚೆನ್ನಾಗಿ ಬಂದವನು, ಪತ್ನೀ ಪುತ್ರರನ್ನು ಬಿಟ್ಟು ಬಂದವನು, ತನ್ನ ರಾಜ್ಯವೂ ಜೀವಿತವೂ ಎಲ್ಲವೂ ಶ್ರೀರಾಮನದೇ ಎಂದು ಶರಣಾಗತನಾಗಿ ಬಂದವನು. ಇವನು (ನತ್ಯಜೇಯಂ) ಪರಿತ್ಯಾಗಕ್ಕೆ ಅಥವಾ ಸ್ವೀಕಾರಕ್ಕೆ ಅರ್ಹನೇ ಎಂಬ ವಿಷಯ ಇಲ್ಲಿ ಮುಖ್ಯವಲ್ಲ. ಶರಣು ಎಂಬ ಶಬ್ದವನ್ನು ಉಚ್ಚರಿಸಿದ್ದಾನೆ. ನಾವು ಅವನನ್ನು ಬಿಡಲಾರೆವು. (ಕಥಂಚನ) ಶರಣಾಗತನಿಗೆ ಗುಣವಿರಲಿ, ಇಲ್ಲದಿರಲಿ, ದೋಷ ಬಹುವಾಗಿಯೇ ಇರಲಿ, ಇವನನ್ನು ಸೇರಿಸಿಕೊಳ್ಳುವ ವಿಷಯದಲ್ಲಿ ಜನಾಭಿಪ್ರಾಯ ಇರಲಿ, ಇಲ್ಲದಿರಲಿ, ಇವನನ್ನು ಸ್ವೀಕರಿಸಿದರೆ ಮುಂದೆ ದೃಷ್ಟಾ ದೃಷ್ಟ ಪ್ರತ್ಯವಾಯಗಳು ಸಾವಿರವಿದ್ದರೂ ನಾವು ಇವನನ್ನು ಯಾವ ಕಾಲಕ್ಕೂ ಬಿಡುವುದಿಲ್ಲ.

ದೋಷೋಯದ್ಯಪಿ ತಸ್ಯಸ್ಯಾತ್—ಅಭ್ಯನುಜ್ಞೆಯನ್ನು ತೋರಿಸುವುದಕ್ಕಾಗಲೀ, ಸಂಭಾವನೆಯನ್ನು ಸೂಚಿಸುವುದಕ್ಕಾಗಲೀ, ದುಷ್ಟರನ್ನು ಕೂಡ 'ಶರಣಾಗತನಾಗಿರುವೆನು' ಎಂಬ ಶಬ್ದದಿಂದ ಪರಿಗ್ರಹಿಸುವೆನು. ಇಂತಹ ಮಹತ್ತಾದ ಗುಣಾತಿಶಯ ಸಿದ್ಧನಾಗಿ ದೋಷಿಯ ಪ್ರಾರ್ಥನೆಯನ್ನು ಅಂಗೀಕರಿಸಿದುದು ಎಂಬ ಅರ್ಥವನ್ನು ಸ್ಯಾತ್ ಸೂಚಿಸುವುದು.

ಸತಾಮೇತದಗರ್ಹಿತಂ—ಅಗರ್ಹಿತಂ—ಪೂಜನೀಯವಾದದ್ದು. ಶರಣಾಗತರನ್ನು ಬಿಟ್ಟು ಕೊಡುವುದಿಲ್ಲ. ಅವನಲ್ಲಿ ದೋಷವಿದ್ದರೂ ಬಾಧಕವಿಲ್ಲ ಎಂಬ ಶ್ರುತಿಯ ಅರ್ಥವನ್ನು ಅನುಷ್ಠಾನಕ್ಕೆ ತಂದಂತೆ ಆಗುವುದು. ವಸಿಷ್ಠ ವಿಶ್ವಾಮಿತ್ರ ಮುಂತಾದ ಸಜ್ಜನರ ಉಪದೇಶವನ್ನು ಅನುಷ್ಠಾನಕ್ಕೆ ತಂದಂತಾಗುವುದು. ಬೃಹಸ್ಪತಿ ಮುಂತಾದ ಸಜ್ಜನರು ತಮ್ಮ ಹೃದಯದಲ್ಲಿ ನೆಲೆಸುವಂತೆ ತಮ್ಮ ಪ್ರಭಾವಕ್ಕೆ ಕುಂದುಬಾರದಂತೆ ನಮ್ಮನ್ನು ಗೌರವದಿಂದ ಕಾಣಿರಿ ಎಂದು ವಾನರವೀರರಿಗೆ ಹೇಳಿದನೆಂದು ಅಭಿಪ್ರಾಯ. ಹೀಗೆ ಶ್ರೀರಾಮನು ತನ್ನ ಶರಣಶೀಲತ್ವವನ್ನು ಚೆನ್ನಾಗಿ ವ್ಯಕ್ತಪಡಿಸಿದಾನೆ.

ದೀನನಾಗಲೀ ದುಷ್ಟನಾಗಲೀ ಅಪರಾಧಿಯಾಗಲೀ ತಳ್ಳಿ ಹಾಕುವುದಕ್ಕೆ ಅರ್ಹನಾಗಿರಲಿ ಏನಾದರೂ ಶರಣಾಗತನಾದವನನ್ನು ಸಮರ್ಥ ಸತ್ಪುರುಷನನ್ನು ರಕ್ಷಿಸಲೇಬೇಕೆಂಬ ರಾಜಮಾರ್ಗವು, ವಿಶ್ವಾಮಿತ್ರ, ಕಪೋತ, ವಾನರ, ರಘು, ನಾಳೀಜಂಘ, ಬೃಹಸ್ಪತಿ ಮುಂತಾದ ಸತ್ಪುರುಷರಿಂದ ಸ್ವೀಕರಿಸಲ್ಪಟ್ಟಿದೆ. ಹೀಗೆ ಅಭಯ ಪ್ರದಾನವು ಪರಮಧರ್ಮವೆಂದು ನಿರ್ಣಯಿಸಲ್ಪಟ್ಟಿದೆ. ಇದು ವಿಪುಲವಾಗಿ ರಾಮಾಯಣದಲ್ಲಿ ನಿರೂಪಿತವಾಗಿದೆ.

ಶ್ರೀರಾಮನು ಅಭಯಪ್ರದಾನರೂಪವಾದ ತನ್ನ ಶರಣ್ಯವ್ರತ ವಿಶೇಷ ಪ್ರಕಾಶಾಧಿಕಾರವನ್ನು ಹೀಗೆ ಉಪದೇಶ ಮಾಡಿದ್ದಾನೆ.

ಸಕೃದೇವ ಪ್ರಪನ್ನಾಯ
ತವಾಸ್ಮೀತಿ ಚ ಯಾಚತೇ ।
ಅಭಯಂ ಸರ್ವಭೂತೇಭ್ಯೋ
ದದಾಮ್ಯೇತ ತತ್ ವ್ರತಂ ಮಮ ॥

—ಭಕ್ತ್ಯಾದಿ ಉಪಾಯಗಳಲ್ಲಿ ಆವರ್ತಿಯು ಶಾಸ್ತ್ರಾರ್ಥವಾಗಿರುವಂತೆ ಶರಣಾಗತಿ ಆವೃತ್ತಿಯಿಲ್ಲ ಎಂಬುದು ಶಾಸ್ತ್ರ. ಏವ ಎಂಬುದರಿಂದ ಇದಕ್ಕೆ ಇನ್ನೊಂದರ ಸಹಾಯಬೇಕಿಲ್ಲ, ಇಲ್ಲಿ ಮುಖ್ಯವಾದ ಗೋಪ್ತೃತ್ವ ವರಣ ಆತ್ಮ ನಿಕ್ಷೇಪ ಎರಡೂ ಸೂಚಿತವಾಯಿತು. ಅನನ್ಯ ಪ್ರಯೋಜನವೆಂದು ತಿಳಿಸಲಾಯಿತು. ಶರಣಾಗತಿಯು ಸಕಲಸಾಧನವೆಂದೂ ವ್ಯಕ್ತವಾಯಿತು. ಭಯಶಬ್ದಕ್ಕೆ ಸಂಕೋಚವಿಲ್ಲದಂತೆ ಸರ್ವಾತ್ರಯಭಾವವೂ ಸೂಚಿತವಾಯಿತು. ಶರಣಾಗತಿಯು ಪ್ರಪನ್ನನಿಗೂ ಸರ್ವಭೂತಗಳಿಗೂ ಸರ್ವಾಧಿಕಾರವಾಗುವುದೆಂದು ಸಿದ್ಧಿಸುವುದು. ಸರ್ವಭೂತಗಳಿಗೆ ಕಾರಣವಾಗಿಯೂ ಸರ್ವಫಲಪ್ರದವಾಗಿಯೂ ಇರುವ ಭಗವಂತನಿದ್ದಾನೆಂದು ತಿಳಿಯುವವನು, ಕೈಯಲ್ಲಿ ಹಿಡಿದಿರುವ ಚಾವಟಿಯಂತೆ ಇರುವ ಇತರ ಯಾವ ವಸ್ತುಗಳಿಂದಲೂ ಹೆದರಲಾರನು. ಇದು ಪ್ರಮಾಣ ಸಿದ್ಧವಾಗಿಯೂ ಮಾಡದೆ ಬಿಟ್ಟರೆ ಪ್ರತ್ಯವಾಯಬರುವಂತಹ ಧಾರ್ಮಿಕವಾದ ಸಂಕಲ್ಪವಾಗಿರುವುದು. ನಮಗೆ ಈ ಸಂಕಲ್ಪವನ್ನು ನಡೆಸಲು ಬಾಧಕಗಳಾದ ಅಜ್ಞಾನ, ಅಶಕ್ತಿ,—ಮುಂತಾದುವು ಯಾವ ಕಾಲಕ್ಕೂ ಬರುವುದಿಲ್ಲ. ಆದುದರಿಂದ ಕೈಬಿಡಲಾಗದ ಈ ವ್ರತವನ್ನು ನಮ್ಮ ಹಿತಚಿಂತಕರಾದ ನೀವೆಲ್ಲ ಸಮ್ಮತಿಸಿ ಕಾಪಾಡಿರಿ.

—ಹೀಗೆ ಶ್ರೀರಾಮನು ಶರಣಾಗತಿಯಾದ ಸರ್ವಾಧಿಕಾರತ್ವವನ್ನು ವಿಭೀಷಣನ ಮೂಲಕ ತಿಳಿಸಿ ಅಭಯಪ್ರದಾನ ಮಾಡಿದನು. 'ವಿಭೀಷಣೋವಾ ಯದಿ ವಾ ರಾವಣಸ್ಸ್ವಯಂ' – ನೀವು ವಿಭೀಷಣನೇ ಆಗಲಿ, ಕಪೋತಪಕ್ಷಿಯ ಹೆಸರು ವಾಸಿಯನ್ನು ನಡೆಸಬೇಕೆಂದಿರುವ ನಮ್ಮ ಮನೋರಥದಂತೆ ರಾವಣನೇ ಆಗಿರಲಿ, ನಾವು ಅಭಯಪ್ರದಾನ ಮಾಡಲು ಹಿಂಜರಿಯುವುದಿಲ್ಲ. ವಾನರ ವೀರರೇ! ನಿಮ್ಮನ್ನೂ ನಿಮ್ಮ ಪರಿವಾರವನ್ನೂ ಪುರುಷಕಾರವಾಟ್ಟುಕೊಂಡು ನಮ್ಮಲ್ಲಿ ಶರಣಾಗತನಾಗಿ ಬಂದಿದ್ದಾನೆ. ಶರಣಾಗತನಾದವನನ್ನು ಶ್ರೀ ವೈಕುಂಠದಲ್ಲಿ ಅಮಾನವ ಪುರುಷನು, ಪರವಾಸುದೇವನ ಬಳಿಗೆ ಕಳೆದುಕೊಂಡು ಹೋಗಿ ಅವನ ಸಾನ್ನಿಧ್ಯದಲ್ಲಿ ಅರ್ಪಿಸುವಂತೆ ನೀವು ವಿಭೀಷಣನನ್ನು ನಮ್ಮಲ್ಲಿ ಸೇರಿಸಿ, ಈ ಪುರುಷಾರ್ಥವು ನಮಗೆ ಸೇರುವಂತೆ ಮಾಡಿ' ಎಂದು ಶ್ರೀರಾಮನು ಅಪ್ಪಣೆ ಕೊಡಿಸಿದನು. 'ಶರಣಾಗತನಿಗೆ ಭಯವನ್ನುಂಟುಮಾಡುವುದು ಸರಿಯಲ್ಲ. ವಾನರರಾಜ್ಯಕ್ಕೆ ಅಗ್ರಗಣ್ಯನಾಗಿ, ಅಧಿಪತಿಯಾಗಿ, ಮಹಾಸಾಮ್ರಾಜ್ಯ ಅಧಿಪತಿಯಾಗಿರುವ ಸುಗ್ರೀವ ನೀನು ವಿಭೀಷಣನನ್ನು ಕರೆದು ತಂದು ನಮ್ಮಲ್ಲಿ ಸೇರಿಸು'—ಆನಯೈನಂ ಎಂಬುದರಿಂದ ಕಾರ್ಯವು ಪೂರ್ಣವಾಗಿ ಸಿದ್ಧಿಯಾಗಿ ಅಭಯಪ್ರದಾನವಾಯಿತು. ★

# ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**

# ಮಹಾಕವಿ ಭಾರವಿ

ಆದಿಕವಿ ವಾಲ್ಮೀಕಿಯ ರಾಮಾಯಣವನ್ನು ಆಧಾರವಾಗಿಟ್ಟುಕೊಂಡು ತಮ್ಮ ಪ್ರತಿಭಾವಿಶೇಷದಿಂದ ಅನೇಕ ಕವಿಗಳು ಕಾವ್ಯಗಳನ್ನೋ ನಾಟಕಗಳನ್ನೋ, ಚಂಪೂಗ್ರಂಥಗಳನ್ನೋ ರಚಿಸಿ ಪ್ರಸಿದ್ಧರಾಗಿರುವಂತೆಯೇ ವ್ಯಾಸಮಹರ್ಷಿಯ ಮಹಾಭಾರತದ ಆಧಾರದ ಮೇಲೆ ಅನೇಕ ಕವಿಗಳು ಸಂಸ್ಕೃತ, ಕನ್ನಡ, ತೆಲುಗು, ಹಿಂದಿ, ಮರಾಠಿ ಮೊದಲಾದ ನಾನಾಭಾಷೆಗಳಲ್ಲಿ ಅಸಂಖ್ಯಾತ ಗ್ರಂಥಗಳನ್ನು ವಿರಚಿಸಿ ಸುಪ್ರಸಿದ್ಧರಾಗಿರುತ್ತಾರೆ.

ಇವರಲ್ಲಿ ಕಾಳಿದಾಸ, ಭಾರವಿ, ಮಾಘ, ಶ್ರೀಹರ್ಷ ಮೊದಲಾದವರು ಸುಪ್ರಸಿದ್ಧ ಮಹಾಕಾವ್ಯಗಳನ್ನು ರಚಿಸಿ ಪ್ರಸಿದ್ಧರಾದವರು. ಕಾಳಿದಾಸನ "ರಘುವಂಶ" "ಕುಮಾರಸಂಭವ" ಭಾರವಿ ವಿರಚಿತ "ಕಿರಾತಾರ್ಜುನೀಯ" ಮಾಘಕವಿ ವಿರಚಿತ "ಶಿಶುಪಾಲವಧ" ಶ್ರೀಹರ್ಷವಿರಚಿತ "ನೈಷಧೀಯಚರಿತ" ಅಥವಾ "ನೈಷಧ"– ಇವು ಪಂಚಮಹಾಕಾವ್ಯಗಳೆಂದು ಪ್ರಸಿದ್ಧಿ ಪಡೆದಿವೆ. "ಕಿರಾತಾರ್ಜುನೀಯ"ವನ್ನು 'ಭಾರವಿ' ಎಂದೂ, "ಶಿಶುಪಾಲವಧ"ವನ್ನು 'ಮಾಘ'ವೆಂದೂ, ಆ ಕವಿಗಳ ಹೆಸರಿನಲ್ಲಿಯೇ ವ್ಯವಹರಿಸುವುದೂ ಉಂಟು. ಈ ಪಂಚಮಹಾಕಾವ್ಯಗಳಲ್ಲದೆ ಇನ್ನೂ ಅಸಂಖ್ಯಾತ ಕಾವ್ಯಗಳಿದ್ದರೂ ಇವುಗಳಷ್ಟು ಪ್ರಸಿದ್ಧಿಯನ್ನು ಜನಾದರಣೆಯನ್ನು ಅವು ಗಳಿಸಿಲ್ಲ. ಹಿಂದಿನ ತಲೆಮಾರಿನ ಸಂಸ್ಕೃತಾಭಿಮಾನಿಗಳು ಈ 5 ಕಾವ್ಯಗಳನ್ನು ಸಮಗ್ರವಾಗಿಯೋ ಭಾಗಶಃ ಆಗಿಯೋ ಬಲಾತ್ಕಾರವಾಗಿ ಬಾಲ್ಯದಲ್ಲಿಯೇ ಕಲಿಸುತ್ತಿದ್ದರು. ಆ ಪೀಳಿಗೆಗೆ ಸೇರಿದವರು ಕಾಲಕ್ರಮದಲ್ಲಿ ಮಹಾವಿದ್ವಾಂಸರಾಗಿ ವಿಜೃಂಭಿಸುತ್ತಿದ್ದರು. ಆ ಗುಂಪಿಗೆ ಸೇರಿದ ಮಹನೀಯರು ಈಗಲೂ ಕೆಲವರಾದರೂ ನಮ್ಮ ದೇಶದಲ್ಲಿ ದೊರೆಯಬಹುದು. ಈ 5 ಕಾವ್ಯಗಳಲ್ಲಿ ನೈಷಧವು ಇತರ ಕಾವ್ಯಗಳಿಗಿಂತ ಆಕಾರದಲ್ಲಿ ದೊಡ್ಡದು ಹಾಗೂ ಅಪೂರ್ವ ಮತ್ತು ಕ್ಲಿಷ್ಟ ಪದಗಳಿಂದ ರಚಿತವಾದುದು. ಆದ್ದರಿಂದಲೇ "ನೈಷಧಂ ವಿದ್ವದೌಷಧಂ" ಎಂಬ ಉಕ್ತಿಯು ಪ್ರಚಾರದಲ್ಲಿ ಬಂದಿತು. ಇತರ ಕಾವ್ಯಗಳಷ್ಟು ಲಲಿತವಾಗಿರುವುದಿಲ್ಲವಾದ್ದರಿಂದ ಅರ್ಥವಾಗುವುದು ಅಷ್ಟು ಸುಲಭವಲ್ಲ.

ಪ್ರಕೃತ, ಭಾರವಿಯ ವಿಚಾರವಾಗಿ ಕೆಲವು ಅಂಶಗಳನ್ನು ತಿಳಿಸಲು ಈ ಲೇಖನದಲ್ಲಿ ಪ್ರಯತ್ನಿಸಲಾಗಿದೆ.

ಉಪಮಾ ಕಾಳಿದಾಸಸ್ಯ
ಭಾರವೇರರ್ಥಗೌರವಮ್ ।
ದಂಡಿನಃ ಪದಲಾಲಿತ್ಯಂ
ಮಾಘೇ ಸಂತಿ ತ್ರಯೋ ಗುಣಾಃ ॥

ಎಂಬ ಉಕ್ತಿಯು ಸರ್ವರಿಗೂ ಸುವಿದಿತವಾದುದು. ಕಾಳಿದಾಸನಂತೆಯೇ ಇತರ ಮಹಾಕವಿಗಳೂ ಉಪಮಾಲಂಕಾರವನ್ನು ಎಷ್ಟೇ ಮನೋಜ್ಞವಾಗಿ ಚಿತ್ರಿಸಿದರೂ ಸಹ, ಅದನ್ನು ವಿಮರ್ಶಿಸುವಷ್ಟು ಸಾಮರ್ಥ್ಯವು ಅವರಲ್ಲಿ ಕಂಡುಬರುವುದಿಲ್ಲವಾದ್ದರಿಂದ ಕಾಳಿದಾಸನಿಗೆ ಆ ಅಪೂರ್ವ ಗೌರವವು ಶಾಶ್ವತವಾಗಿ ನಿಂತುಹೋಯಿತು. ಭಾರವಿಯು ಅರ್ಥ ಪರಿಪುಷ್ಟಿಯ ಕಡೆಗೆ ಹೆಚ್ಚು ಗಮನವನ್ನು ಕೊಟ್ಟಿರುವುದರಿಂದ ಅವನಿಗೆ ಅರ್ಥಗೌರವಕ್ಕಾಗಿ ಗೌರವವು ಮೀಸಲಾಗಿದೆ. ದಂಡಿ ಮಹಾಕವಿಯ ಪದಗುಂಫನವು ಮನೋಹರವಾಗಿದೆ. ಅದನ್ನು ಪದಲಾಲಿತ್ಯವೆಂದು ಹೇಳಲು ಸಾಧ್ಯವಿಲ್ಲದಿದ್ದರೂ ಪದಲಾಲಿತ್ಯಕ್ಕಾಗಿ ಅವನಿಗೆ ಗೌರವವು ಸಂದಿದೆ. ಈ ಶ್ಲೋಕವನ್ನು ರಚಿಸಿದ ರಸಿಕನಿಗೆ ಮಾಘಕವಿಯು ಅಚ್ಚುಮೆಚ್ಚಿನ ಕವಿಯಾಗಿರುವಂತೆ ಕಾಣುತ್ತದೆ. ಆದ್ದರಿಂದ ಅವನು "ಮಾಘೇ ಸಂತಿ ತ್ರಯೋಗುಣಾಃ" ಎಂದು ವರ್ಣಿಸಿ ಇವರೆಲ್ಲರಲ್ಲಿಯೂ ಇರುವ ಈ ಅಪೂರ್ವವಾದ 3 ಗುಣಗಳು ಮಾಘನೊಬ್ಬನಲ್ಲಿಯೇ ಇದೆ–ಎಂದು ವರ್ಣಿಸಿರಬಹುದು.

ಭಾರವಿಯು ಕ್ರಿ. ಶ. 550 ರಿಂದ 600 ರ ವರೆಗೆ ಇದ್ದನೆಂದೂ ಇವನು ಕನ್ನಡ ನಾಡಿನವನೆಂದೂ ಅನೇಕ ಆಧಾರಗಳಿಂದ ವ್ಯಕ್ತವಾಗುತ್ತದೆ.

ಮಾಘಕವಿಯು ಭಾರವಿಯ ಕಾವ್ಯಮಾರ್ಗವನ್ನು ಅನುಕರಣ ಮಾಡಿರುವನೆಂದು ಪ್ರಸಿದ್ಧ ಸಂಶೋಧಕರಾದ ಸೂರ್ಯನಾರಾಯಣಶಾಸ್ತ್ರಿಗಳು ಅಭಿಪ್ರಾಯಪಟ್ಟಿರುತ್ತಾರೆ. ದಂಡಿಯು ಭಾರವಿಯ ಮಗನ ಪ್ರಪೌತ್ರನೆಂದು ಉಕ್ತವಾಗಿದೆ. "ಅವಂತಿ ಸುಂದರೀಕಥಾ"ವನ್ನು ದಂಡಿಯು ಬರೆದನೆಂದು ತಿಳಿದು ಬರುತ್ತದೆ.

ಭಾರವಿಯ ವಿಚಾರವಾಗಿ ಅಧಿಕ ವಿವರಗಳು ದೊರೆಯದಿದ್ದರೂ ಕೆಳಕಂಡ ವಿವರಗಳು ದೊರೆತಿವೆ. ಭಾರತದ ವಾಯುವ್ಯಭಾಗದಲ್ಲಿ ಆನಂದಪುರವೆಂಬ ಅಗ್ರಹಾರವಿತ್ತು. ಅದು ಭಾರತ ದೇಶಕ್ಕೆ ಅಲಂಕಾರಪ್ರಾಯವಾಗಿತ್ತು. ಅದರಲ್ಲಿ ಕೌಶಿಕಗೋತ್ರೋದ್ಭವನಾದ ನಾರಾಯಣಸ್ವಾಮಿಯೆಂಬ ವಿಪ್ರವರ್ಯನು ಆ ಸ್ಥಳದಿಂದ ದಕ್ಷಿಣಕ್ಕೆ ಬಂದು ಅಚಲಪುರವೆಂಬ ಸ್ಥಳದಲ್ಲಿ ನೆಲೆಸಿದನು. ಅವನಿಗೆ ದಾಮೋದರನೆಂಬ ಪುತ್ರನೊಬ್ಬನು ಜನಿಸಿದನು. ಅವನ ವರ್ಚಸ್ಸನ್ನು ಮತ್ತು ಪ್ರತಿಭೆಯನ್ನು ನೋಡಿ ಮುಗ್ಧರಾದ ಜನರು ಅವನನ್ನು 'ಭಾರವಿ' (ಬೆಳಗುವ ಸೂರ್ಯ) ಎಂದು ಕರೆದರು. ಇವನು ಬಾಲ್ಯದಲ್ಲಿಯೇ ವಿದ್ಯಾಭ್ಯಾಸದಲ್ಲಿ ಅತಿಚತುರನಾಗಿ ಪ್ರಸಿದ್ಧನಾದನು. ಚಾಲುಕ್ಯ ವಿಷ್ಣುವರ್ಧನನು ಇವನ ಆಪ್ತಮಿತ್ರ. ಕಾಲಕ್ರಮದಲ್ಲಿ ಭಾರವಿಯು ತಲಕಾಡಿನ ಗಂಗರಾಜ ದುರ್ವಿನೀತನ ಆಸ್ಥಾನವನ್ನು ಸೇರಿ ಆಸ್ಥಾನಕವಿ ಎನಿಸಿಕೊಂಡನಂತೆ.

ಶ್ರೀ ಎಂ. ವಿ. ಸಂಪತ್ಕುಮಾರಾಚಾರ್ಯ

ಭಾರವಿಯು ಬಾಲ್ಯದಲ್ಲಿಯೇ ಮಹಾಪ್ರತಿಭಾವಂತನಾಗಿದ್ದನಂತೆ. ಅವನ ಪ್ರತಿಭೆ ಮತ್ತು ಕವಿತಾಸಾಮರ್ಥ್ಯವನ್ನು ಕಂಡು ವಿದ್ವಾಂಸರು ಅವನ ತಂದೆಯ ಹತ್ತಿರ ಅವನನ್ನು ಮುಕ್ತಕಂಠದಿಂದ ಪ್ರಶಂಸಿಸುತ್ತಿದ್ದರಂತೆ. ಆದರೆ ತಂದೆಯು ಮಾತ್ರ ಅವನನ್ನು ತಿರಸ್ಕರಿಸುತ್ತಿದ್ದನಂತೆ. ಸಭೆಯಲ್ಲಿಯೂ ಅವನನ್ನು ಹೀಯಾಳಿಸಿ ಮಾತನಾಡುತ್ತಿದ್ದನಂತೆ. ಇದರಿಂದ ಬಹಳ ಖಿನ್ನನಾದ ಭಾರವಿಯು ತನ್ನ ತಂದೆಯ ವಿಚಾರದಲ್ಲಿಯೇ ಬಹಳ ಅಸಮಾಧಾನಗೊಂಡನು. ಕೊನೆಗೆ ತನ್ನ ತಂದೆಯು ಜೀವಿಸಿರುವವರೆಗೂ ತನ್ನ ಪ್ರತಿಭೆಯು ಪ್ರಕಾಶವಾಗುವುದಿಲ್ಲವೆಂದು ಭಾವಿಸಿ, ಹೇಗಾದರೂ ಅವನನ್ನು ಮುಗಿಸಿಬಿಡಬೇಕೆಂದು ನಿರ್ಧರಿಸಿದನು. ಇದರಿಂದ ಅವನ ಮನಸ್ಸಿಗೆ ಸ್ವಲ್ಪವೂ ನೆಮ್ಮದಿ ಇಲ್ಲದೆ ಊಟ ಉಪಚಾರಗಳನ್ನೂ ಕಡೆಗಣಿಸಿದಂತೆ. ಇದನ್ನು ಗಮನಿಸಿದ ಅವನ ತಾಯಿಯು ಒಂದು ರಾತ್ರಿ ಭೋಜನಸಮಯದಲ್ಲಿ ಪತಿಯೊಡನೆ ಸಲ್ಲಾಪವನ್ನು ಆರಂಭಿಸಿದಳು. ಆ ಸಮಯದಲ್ಲಿ ಭಾರವಿಯು ಆ ರಾತ್ರಿ ತಂದೆಯ ಪ್ರಾಣವನ್ನು ಹೀಗೆ ಮುಗಿಸಬೇಕೆಂಬ ಸಂಚಿನಲ್ಲಿ ಮಗ್ನನಾಗಿ, ಮನೆಯ ಮಹಡಿಯ ಮೇಲೆ ಮರೆಯಾಗಿ ಕುಳಿತಿದ್ದನಂತೆ. ಅವನ ತಂದೆಯೂ ಸಹ ಹುಡುಗನು ಕಾಣಲಿಲ್ಲವೆಂದೂ ಏಕೋ ಚಿಂತಾಕ್ರಾಂತನಾಗಿರುವನೆಂದೂ ತಿಳಿಸಿದಾಗ ತಾಯಿಯು "ಇದಕ್ಕೆಲ್ಲಾ ನೀವೇ ಕಾರಣರು" – ಎಂದು ತಿಳಿಸಿ, ಸರ್ವರೂ ಅವನ ವಿದ್ವತ್ತನ್ನು ಪ್ರಶಂಸಿಸುತ್ತಿರುವಾಗ ನೀವು ಅವನನ್ನು ತೆಗಳುವುದರಿಂದಲೇ ಅವನು ಹೀಗಾಗಿರಬಹುದೆಂದು ಆಕ್ಷೇಪಿಸಿದಳು. ಆಗ ಪತಿಯು "ನನಗೆ ಅವನ ವಿದ್ವತ್ತು ಮತ್ತು ಪ್ರತಿಭೆ ಚೆನ್ನಾಗಿ

ತಿಳಿದಿದೆ. ಆದರೆ ನಾನು ಅವನನ್ನು ಪ್ರಶಂಸಿಸಿದರೆ ಅವನಿಗೆ ಗರ್ವವು ಹೆಚ್ಚಾಗುವುದಲ್ಲದೆ, ಇನ್ನು ಮುಂದೆ ಕಲಿಯುವುದನ್ನು ನಿಲ್ಲಿಸಿಬಿಡುವನು. ಅವನು ಇನ್ನೂ ವಿಶೇಷ ಪ್ರತಿಭಾವಂತನಾಗಿ ಪ್ರಕಾಶಿಸಬೇಕೆಂದು ನಾನು ಉದ್ದೇಶಪೂರ್ವಕವಾಗಿಯೇ ಹೀಗೆ ಮಾಡುತ್ತಿರುವೆನೆ'ಂದು ಹೇಳಿದ್ದನ್ನು ಕೇಳಿ ತಾಯಿಯು ತೃಪ್ತಿಪಟ್ಟಳು. ಈ ರೀತಿಯಾದ ಸಂಭಾಷಣೆಯನ್ನು ಕೇಳಿ ಭಾರವಿಗೆ ಸಹಿಸಲಾರದಷ್ಟು ವ್ಯಾಕುಲವುಂಟಾಗಿ ತನ್ನ ಹೇಯಕೃತ್ಯಕ್ಕಾಗಿ ನಾಚಿಕೆಯೂ ಪಶ್ಚಾತ್ತಾಪವೂ ಉಂಟಾಯಿತು. ಆದರೂ ಕೂಡಲೇ ಅದನ್ನು ವ್ಯಕ್ತಪಡಿಸದೆ, ಮಾರನೆಯ ದಿವಸ ಉಷಃಕಾಲದಲ್ಲಿಯೇ ಎದ್ದು ಬಂದು ತಂದೆಗೆ ಸಾಷ್ಟಾಂಗಪ್ರಣಾಮ ಮಾಡಿ, 'ಪೂಜ್ಯರೇ! ಒಬ್ಬ ಮನುಷ್ಯನು ತನ್ನ ತಂದೆಯನ್ನು ಸಂಹರಿಸಬೇಕೆಂದು ಯೋಚಿಸಿದರೆ ಅದಕ್ಕೆ ಪ್ರಾಯಶ್ಚಿತ್ತವೇನೆಂದು ಕೃಪೆಯಿಟ್ಟು ತಿಳಿಸಬೇಕೆ'ಂದು ಪ್ರಾರ್ಥಿಸಿದನು. ಲೌಕಿಕಪರಿಜ್ಞಾನಚತುರನಾದ ತಂದೆಯು ಇವನ ಅಭಿಪ್ರಾಯವನ್ನು ಕೂಡಲೇ ಅರ್ಥಮಾಡಿಕೊಂಡು, ಮಗು! ಇದಕ್ಕೆ ವಿಶೇಷ ಪ್ರಾಯಶ್ಚಿತ್ತವೇನೂ ಅಗತ್ಯವಿಲ್ಲ. ಮಾವನ ಮನೆಯಲ್ಲಿ ಕೇವಲ 6 ತಿಂಗಳು ಕಾಲ ವಾಸ ಮಾಡಿದರೆ ಅದೇ ಸಾಕೆಂದು ತಿಳಿಸಿದರು. ಅಷ್ಟರಲ್ಲಿ ಭಾರವಿಗೆ ವಿವಾಹವಾಗಿ ಪತ್ನಿ-ರಸಿಕೆಯು ತನ್ನ ತೌರಿನಲ್ಲಿದ್ದಳಂತೆ. ಆದ್ದರಿಂದ ತಂದೆಯು ಹೇಳಿದಂತೆ ಭಾರವಿಯು ಮಾವನಮನೆಗೆ ಹೋಗಿ ನಿಂತನು. ಅಳಿಯನಿಗೆ ಅಲ್ಲಿ ಒಳ್ಳೆಯ ಸ್ವಾಗತ ದೊರೆಯಿತು. ಮೊದಲನೆಯ ದಿವಸ ಉತ್ಕೃಷ್ಟ ಭೋಜನ ದೊರೆಯಿತು. ಮಾರನೆಯ ದಿನ ಸಾಧಾರಣವಾದ ಊಟ. ಮೂರನೆಯ ದಿವಸ ಇನ್ನೂ ಸಾಧಾರಣ. 4ನೆಯ ದಿವಸ ತಂಗಳನ್ನ- ಹೀಗೆ ಕ್ರಮಕ್ರಮವಾಗಿ ಗೌರವವು ಕೃಷ್ಣಪಕ್ಷದ ಚಂದ್ರನಂತೆ ಕ್ಷೀಣಿಸುತ್ತಾ ಬಂದುದಲ್ಲದೆ ಕೊನೆಗೆ ಮನೆಯ ಕೆಲಸವನ್ನು ನಿರ್ವಹಿಸಬೇಕಾದ ಪ್ರಸಂಗವೂ ಬಂದಿತು. ಅನಂತರ ದನಗಳನ್ನು ಕಾಯುವ ಸಂದರ್ಭವೂ ಒದಗಿ ಆ ಕೆಲಸವನ್ನು ನಿರ್ವಹಿಸುತ್ತಾ ಬಂದನು. ಹೊತ್ತಿಗೆ ಮುಂಚೆ ಹೊರಟು ಸಾಯಂಕಾಲವಾದ ಮೇಲೆ ಮನೆಗೆ ಹಿಂದಿರುಗುತ್ತಾ ಇದ್ದುದರಿಂದ ಭಾರವಿಗೆ ಕಾಲಾವಕಾಶವು ಬೇಕಾದಷ್ಟು ದೊರೆಯಿತು. ಈ ಸದವಕಾಶವನ್ನು ಉಪಯೋಗಿಸಿಕೊಂಡು ಅವನು "ಕಿರಾತಾರ್ಜುನೀಯ"ವನ್ನು ಬರೆಯಲು ಆರಂಭಿಸಿದನು. ಪ್ರತಿದಿವಸ ಅವನು ಕಾವ್ಯವನ್ನು ಭೂರ್ಜಪತ್ರದಲ್ಲಿ ಬರೆದು ಇಟ್ಟುಕೊಳ್ಳುತ್ತಿದ್ದನು. ಇಷ್ಟರಲ್ಲಿ ಒಂದು ಸರ್ಗವು ಮುಗಿದು 2ನೆಯ ಸರ್ಗದಲ್ಲಿ 30 ಶ್ಲೋಕಗಳು ಮುಗಿದಿದ್ದವು. ಆ ದಿನ ರಾತ್ರಿ ಭಾರವಿಯ ಪತ್ನಿಯು ಪತಿಯನ್ನು ಸಂಧಿಸಿ, ಮಾರನೆಯ ದಿವಸ ಯಾವುದೋ ಉತ್ಸವಕ್ಕಾಗಿ

(27ನೇ ಪುಟ ನೋಡಿ)

# ಶಂಖ - ಲಿಖಿತ ಮಹರ್ಷಿಗಳು

ಲಿಖಿತರು ಮಹಾ ತಪಸ್ವಿಗಳು. ಅವರ ಸಹೋದರರೇ ಶಂಖರು. ಈ ಇಬ್ಬರೂ ಮಹರ್ಷಿಗಳೂ ತಪಸ್ಸು ಮಾಡಿಕೊಂಡಿದ್ದ ಕಾಲದಲ್ಲಿ ಆ ಪ್ರದೇಶವನ್ನು ಸುದ್ಯುಮ್ನನೆಂಬ ಮಹಾರಾಜನು ಆಳುತ್ತಿದ್ದ. ಅವನದು ನ್ಯಾಯದಲ್ಲಿ ಎತ್ತಿದ್ದ ಕೈ. ಯಾರೇ ತಪ್ಪಿತಸ್ಥನಾಗಿರಲಿ, ಅವನು ತನ್ನ ಬಂಧು ಬಾಂಧವರಲ್ಲಿ ಒಬ್ಬನಾಗಿದ್ದರೂ ಕೂಡ ರಾಜನು ಅವನ ಅಪರಾಧಗಳಿಗೆ ತಕ್ಕ ಶಿಕ್ಷೆಯನ್ನು ವಿಧಿಸುತ್ತಿದ್ದ.

ಲಿಖಿತ ಮಹರ್ಷಿಗಳಿಗೆ ಒಮ್ಮೆ ಸುದೂರದಲ್ಲಿದ್ದ ತಮ್ಮ ಸಹೋದರ ಶಂಖರನ್ನು ಕಾಣಬೇಕೆಂಬ ಬಯಕೆಯುಂಟಾಯಿತು. ಕೂಡಲೇ ಅವರು ಪ್ರಯಾಣ ಹೊರಟರು. ಮನೋವೇಗಕ್ಕೆ ತಕ್ಕಂತೆಯೇ ಪ್ರಯಾಣದ ವೇಗವನ್ನೂ ಹೆಚ್ಚಿಸಿಕೊಂಡ ಅವರು ಶಂಖರ ಆಶ್ರಮವನ್ನು ಇಗೋ–ಇಗೋ ಎನ್ನುವಷ್ಟು ವೇಳೆಯಲ್ಲಿಯೇ ತಲಪಿಬಿಟ್ಟರು. ಆಶ್ರಮದಲ್ಲಿ ಬಂದು ನೋಡುತ್ತಾರೆ, ಸಹೋದರನಿಲ್ಲ. ಶಂಖರು ಆ ವೇಳೆಯಲ್ಲಿ ಎಲ್ಲಿಗೋ ಹೋಗಿದ್ದರು. ಸುದೂರದಿಂದ ಬಂದ ಆಯಾಸ, ಕ್ಷಣಕ್ಷಣವೂ ಉಂಟಾಗುತ್ತಿದ್ದ ಹಸಿವಿನ ಬಾಧೆಗಳಿಂದ ಲಿಖಿತರು ಪೀಡಿತರಾಗಿದ್ದರು. ಪ್ರಶಾಂತವಾತಾವರಣದಲ್ಲಿ ಆಶ್ರಮ ನಿರ್ಮಿಸಲ್ಪಟ್ಟಿತ್ತು. ಸುತ್ತಲೂ ತಿರುಗಿ ನೋಡಿದರು ಲಖಿತರು. ಮಾವಿನ ಮರಗಳಿಂದ ಜೊಂಪೆ ಜೊಂಪೆಯಾಗಿ ಮಾವಿನ ಹಣ್ಣುಗಳು ತೂಗುತ್ತಿದ್ದವು. ಅಣ್ಣನ ಆಶ್ರಮ, ತಾನು ಹಸಿವಿನಿಂದ ಕೂಡಿದ್ದೇನೆ, ಎದುರಿಗೆ ಸೊಗಸಾದ ಹಣ್ಣುಗಳು.ಯಾರನ್ನೇನು ಕೇಳುವುದು. ಲಿಖಿತರು ಮನಬಂದಷ್ಟು ಹಣ್ಣುಗಳನ್ನು ಕಿತ್ತು ತಿಂದರು. ಪಕ್ಕದಲ್ಲೇ ಇದ್ದ 'ಬಾಹ್ಯದಾ'ನದಿಯ ಅಮೃತತುಲ್ಯವಾದ ನೀರನ್ನು ಕುಡಿದರು, ಆಯಾಸದಿಂದ ಅವರು ಹಾಗೇ ಅಲ್ಲೇ ಮಲಗಿಕೊಂಡರು. ಏನೋ ಶಬ್ದವಾಯಿತು. ಲಖಿತರು ಕಣ್ಣು ಬಿಟ್ಟರೆ ಎದುರಿಗೆ ಕ್ರೋಧಾವೇಶದಿಂದ ಶಂಖರು ಏನೋ ಬಡಬಡಿಸುತ್ತಿದ್ದಾರೆ. ತಮ್ಮನನ್ನು 'ಯಾವಾಗ ಬಂದೆ' ಎಂದು ಅವರು ಕೇಳಲಿಲ್ಲ. ಅವರನು ಒಂದೇ ಪ್ರಶ್ನೆ 'ಈ ಮರಗಳ ಹಣ್ಣುಗಳನ್ನು ಯಾರು ಕಿತ್ತು ತಿಂದರು?' ಸಹೋದರನೆಡೆ ಭೀತರಾಗಿ ನೋಡಿ ಲಿಖಿತರು ಹೇಳಿದರು "ಪೂಜ್ಯರೆ ನಾನು".

'ಯಾರನ್ನು ಕೇಳಿ, ಯಾರ ಅನುಮತಿ ಪಡೆದು ಹಣ್ಣುಗಳನ್ನು ತಿಂದೆ'. ಲಿಖಿತರಿಗೆ ಈ ವಿಷಯ ಹೊಸದು ಸಹೋದರನ ಆಶ್ರಮದ ಹಣ್ಣುಗಳನ್ನು ತಿನ್ನಲು ಅನುಮತಿ ಬೇಕೆ!

"ಸಹೋದರ ನಾನು ಯಾರ ಅನುಮತಿಯನ್ನೂ ಕೇಳದೆ ಈ ಕಾರ್ಯವನ್ನು ಮಾಡಿದೆ. ಈ ಪ್ರದೇಶ ನಿನ್ನದಾದುದರಿಂದ ಹೀಗೆ ಮಾಡಿದೆ". "ನಿನ್ನದು ಅಕ್ಷಮ್ಯ ಅಪರಾಧ ಈ ಕೂಡಲೇ ರಾಜನ ಬಳಿ ಹೋಗಿ ನೀನು ಮಾಡಿದ ಅಪರಾಧಕ್ಕೆ ಶಿಕ್ಷೆ ಯಾಚಿಸು". 'ಸಹೋದರ.........

ಶಂಖರು ಲಿಖಿತರ ಮುಖವನ್ನು ನೋಡಲಿಚ್ಛಿಸದೆ 'ಅಪರಾಧಿಯಾದ ನಿನ್ನಿಂದ ನನಗೆ ಕಳಂಕ ಬಂದಿತು' ಎಂದು ಆಶ್ರಮದ ಒಳಹೋಗಿ ಬಾಗಿಲು ಮುಚ್ಚಿ ಕೊಂಡರು.

ಲಿಖಿತರಿಗೆ ಬಹಳ ವೇದನೆಯಾಯಿತು. ತನಗೆ ಶಿಕ್ಷೆ ದೊರೆತ ಹೊರತು ಅಣ್ಣಾಜಿ ತನ್ನನ್ನು ಕ್ಷಮಿಸುವುದಿಲ್ಲ. ಒಡನೇ ಅವರು ನ್ಯಾಯ ಪರಿಪಾಲನೆಗೆ ಹೆಸರಾದ ರಾಜನ ಬಳಿ ಬಂದರು. ಸುದ್ಯುಮ್ನ ಅವರನ್ನು ಆದರಿಸುತ್ತಿರುವಂತೆಯೇ ತಾವು ಮಾಡಿದ ಅಪರಾವನ್ನು ತಿಳಿಸಿ ತಮಗೆ ನ್ಯಾಯಶಾಸ್ತ್ರಬದ್ಧವಾಗಿ ಶಿಕ್ಷೆ ವಿಧಿಸಬೇಕೆಂದೂ ಕೇಳಿಕೊಂಡರು. ರಾಜನೂ ಅಮಾತ್ಯನೂ ವಿಧವಿಧವಾಗಿ ಹೇಳಿದರೂ ಕೇಳಲಿಲ್ಲ. "ಪೂಜ್ಯರೇ ತಾವು ಈ ರೀತಿ ಸತ್ಯವಾಗಿ ನಡೆದುದನ್ನು ಹೇಳಿ ಪ್ರಾಯಶ್ಚಿತ್ತಬದ್ಧರಾದುದರಿಂದ ತಮಗೆ ಯಾವ ರೀತಿಯ ಶಿಕ್ಷೆಯೂ ಸಲ್ಲದು" ಲಿಖಿತರು ಕ್ರುದ್ಧರಾದರು 'ರಾಜನ್ ನನ್ನನ್ನು ಮುನಿಯೆಂಬ ಕಾರಣದಿಂದ ಶಿಕ್ಷೆ ನೀಡಲು ಹಿಂಜರಿಯುತ್ತಿರುವೆ. ಆದರೆ ನೀನು ನನಗೆ ಶಿಕ್ಷೆ ನೀಡಲೇ ಬೇಕು'. ಸುದ್ಯುಮ್ನ ರಾಜ ಭೀತನಾಗಿ ನ್ಯಾಯಶಾಸ್ತ್ರಗ್ರಂಥಗಳನ್ನು ತರಿಸಿದ. ಅಮಾತ್ಯರು ಅವನ್ನು ನೋಡಿ ಹೇಳಿದರು 'ರಾಜನ್ ಹಣ್ಣುಗಳನ್ನು ಕದ್ದ ಅಪರಾಧಿಯ ಎರಡೂ ಕೈಗಳನ್ನು ಕತ್ತರಿಸಿ ಹಾಕುವಂತೆ ನ್ಯಾಯ ಶಾಸ್ತ್ರ ಹೇಳುತ್ತದೆ'. 'ಅಂತೇ ಆಗಲಿ'. ಎಂದರು ಲಿಖಿತರು.

ರಾಜನು ಕಣ್ಣೀರು ಸುರಿಸುತ್ತಾ ಕಟುಕರನ್ನು ಕರೆಸಿದ. ಲಿಖಿತರ ಎರಡೂ ಕೈಗಳು ಕ್ಷಣಾರ್ಧದಲ್ಲಿ ಭೂಗತವಾದವು. ತಮಗೆ ದೊರೆತ ನ್ಯಾಯದಿಂದ ತಮಗಾದ ನೋವನ್ನು ಮರೆಯುತ್ತಾ ಲಿಖಿತರು ಶಂಖರ ಆಶ್ರಮಕ್ಕೆ ಬಂದರು ಹಾಗೆಯೇ ಅಭಿವಾದನ ಮಾಡಿ ಹೇಳಿದರು "ಪೂಜ್ಯರೆ... .. ನನ್ನ ಅಪರಾಧಕ್ಕೆ ತಕ್ಕ ಶಿಕ್ಷೆಯಾಯಿತು." ಶಂಖರು ಅವರತ್ತ ಒಮ್ಮೆ ಕರುಣಾರ್ದ್ರರಾಗಿ ನೋಡಿ ಹೇಳಿದರು "ಸರಿ ಒಳ್ಳೆಯದು......"

ಮುಂದೆ ಒಂದು ದಿನ ಪಿತೃಗಳಿಗೆ ತರ್ಪಣ ಕೊಡುವ ದಿನ ಬಂದಿತು. ವೇದನೆ ಪಡುತ್ತಾ ಮೊಂಡು ಕೈಗಳಿಂದಲೇ ತರ್ಪಣ ಕೊಡಲು ಲಿಖಿತರು ನದಿಯ ತೀರಕ್ಕೆ ಬಂದರು. ನೀರು ಸೋಂಕಿದಂತೆ ಆಶ್ಚರ್ಯ. ಅವರ ಎರಡೂ ಮೊಂಡು ಕೈಗಳೂ ಮಾಯವಾಗಿ ಅಲ್ಲಿ ಚಿನ್ನದ ಬಣ್ಣದ ಪೂರ್ಣಾಕಾರದ ಹಸ್ತಗಳು ಶೋಭಿಸುತ್ತಿವೆ. ತರ್ಪಣ ಕೊಟ್ಟು ಲಿಖಿತರು ಹಿಂದಿರುಗಿದಾಗ ಹಸನ್ಮುಖರಾದ ಶಂಖರು ಕಂಡರು. ಸಹೋದರನ್ನು ಬಾಚಿ ತಬ್ಬಿಕೊಂಡರು. 'ಬಹಳ ನೋವಾಯಿತೆ ಲಿಖಿತ ನಮ್ಮ ವಂಶದಲ್ಲಿ ಇದುವರೆಗೂ ಯಾರೂ ಅಪರಾಧ ಮಾಡಿದ್ದಕ್ಕೆ ಶಿಕ್ಷೆಯನ್ನು ಪಡೆಯದೆ ತಲೆಮರೆಸಿಕೊಂಡಿಲ್ಲ. ನಿನ್ನಿಂದ ನಮ್ಮ ವಂಶಕ್ಕೆ ಕಳಂಕ ಬಾರದಿರಲೆಂದು ಹೀಗೆ ನಾನು ಕಠಿನ ಮನಸ್ಸುಳ್ಳವನಾಗಬೇಕಾಯಿತು. ನನ್ನನ್ನು ಕ್ಷಮಿಸುಬಿಡು.'

**ಶ್ರೀ ಕೆ. ರಮಾನಂದ**



ದೊಡ್ಡ ಶೇಷವಾಹನ

ಶ್ರೀನಿವಾಸನು ಲೀಲಾವಿಭೂತಿಯಲ್ಲಿ ತಾನು ಸೃಷ್ಟಿಸಿ ವಿಕಾಸವಾಗುವಂತೆ ಮಾಡಿದ ಜೀವಿಗಳಿಗೆ ಅವರವರ ಸುಕೃತ ದುಷ್ಕೃತಗಳಿಗೆ ತಕ್ಕಂತೆ ಹಲವರಿಗೆ ಇಹದಲ್ಲಿ ಸುಖಶಾಂತಿಗಳನ್ನೂ, ಪರದಲ್ಲಿ ಸ್ವರ್ಗ ಸ್ವರಾಜ್ಯಾದಿಗಳನ್ನೂ ಇನ್ನು ಹಲವರಿಗೆ ಇಹದಲ್ಲಿ ದುಃಖವನ್ನೂ ಪರದಲ್ಲಿ ರೌರವಾದಿ ನರಕವನ್ನೂ ನೀಡಿ ವಿನೋದ ಹೊಂದುವನು. ಇನ್ನು ಹಲವರನ್ನು ಅವರ ಸುಕೃತ ವಿಶೇಷ



ಚಿಕ್ಕ ಶೇಷವಾಹನ

ಗಳನ್ನು ಅನುಸರಿಸಿ ತನ್ನೊಂದಿಗೆ ಆಟವಾಡುವಂತೆ ಮಾಡುವನು. ಅವರಿಂದ ಆಲಯ ಗೋಪುರಾದಿಗಳನ್ನು ನಿರ್ಮಾಣ ಮಾಡಿಸಿ ಅವುಗಳಲ್ಲಿ ತಾನು ಪ್ರತಿಷ್ಠಿತನಾಗುವನು. ಅವರು ಮಾಡುವ ಸೇವೆಯನ್ನು ಅನುಮತಿಸುವನು ಅವರಿಂದ ಉತ್ಸವ, ಮೆರವಣಿಗೆಗಳನ್ನು ಮಾಡಿಸಿಕೊಳ್ಳುವನು. ಈ ಕ್ರೀಡೆಗಳಲ್ಲಿ ತಾನು ಅರ್ಚಾರೂಪದಿಂದ ಅನುಪ್ರವಿಷ್ಟನಾಗಿ ಕ್ರೀಡಾಕಾರರಿಗೆ ಪರಮಪದ ಪನ್ನೀಯುವನು. ಈ ರೀತಿಯಾದ ಭಗವತ್ಕ್ರೀಡೆಗಳಲ್ಲಿ ಬ್ರಹ್ಮೋತ್ಸವ ಪ್ರಮುಖವಾದದ್ದು.

ಸವ ಎಂಬ ಪದದ ಅರ್ಥ ಯಾಗವೆಂಬುದು. ಯಾಗವೆಂದರೆ ದೇವಪೂಜೆ. ಉತ್+ಸವ > ಉತ್ಸವವೆಂದಲ್ಲಿ ಉತ್ಕೃಷ್ಟವಾದ ಯಾಗ. ಯಾಗಗಳು ಎರಡುವಿಧ. ಅಗ್ನಿಷ್ಟೋಮಾದಿಗಳು ಅಮೂರ್ತಯಾಗಗಳು. ಶ್ರೀಹರಿಯ ಪ್ರತಿಷ್ಠೆಯೆಂದರೆ ಅರ್ಚನೆ, ಉತ್ಸವ ಮೊದಲಾದ ಕೈಂಕರ್ಯಗಳು ಸಮೂರ್ತಯಾಗಗಳು. ಅಮೂರ್ತಯಾಗಗಳು ಯಜಮಾನ, ತತ್ಪತ್ನೀಮಾತ್ರ ನಿರ್ವಾಹ್ಯಗಳು. ಕ್ವಚಿತ್ತಾಗಿ ಜೀವಹಿಂಸೆಯಿಂದ ಕೂಡಿದವು. ಅವುಗಳಿಂದ ಲಭಿಸುವ ಫಲ 'ಅಪೂರ್ವ'. ಆ ಮೂಲಕವಾಗಿ ಪತ್ನೀಯಜಮಾನರಿಗೆ ಸ್ವರ್ಗ ಸ್ವರಾಜ್ಯಗಳು ಲಭಿಸುತ್ತವೆ ಎನ್ನುವರು. ಇನ್ನು ಅರ್ಚಾರೂಪ ಪ್ರತಿಷ್ಠೆ, ತರ್ಪಣೆ, ಉತ್ಸವ – ಮೊದಲಾದ ಸಮೂರ್ತಯಾಗಗಳಲ್ಲಿ ಆಚಾರ್ಯನೊಂದಿಗೆ ಭಕ್ತರೂ ಸಹ ಯಥಾಶಕ್ತಿ ದೀಕ್ಷಿತರಾಗಬಹುದು. ಆಯಾಯಾ ಕೈಂಕರ್ಯರೂಪ ಯಾಗಗಳಲ್ಲಿ ಪಾಲುಗೊಳ್ಳಬಹುದು. ಹೀಗೆ ಪಾಲುಗೊಳ್ಳುವುದನ್ನು ಶ್ರೀನಿವಾಸನ ಸನ್ನಿಧಿಯಲ್ಲೂ ಸರ್ವ ಭಗವದಾಲಯಗಳಲ್ಲೂ ನೋಡುತ್ತಿದ್ದೇವೆ. ಈ ಯಾಗಗಳಲ್ಲಿ ಸಾತ್ವಿಕವಾದ ಪುಷ್ಪಫಲ, ಹವಿಸ್ಸು, ಆಜ್ಯಗಳನ್ನು ಬಳಸಲಾಗುತ್ತದೆ. ಹಿಂಸೆಗೆ ಹುಗಲಿಲ್ಲ. ಭಗವದ್ಧ್ಯಾನಪರೀವಾಹದಿಂದ ಕೂಡಿದ ಯಾಗ ಸಮೂರ್ತಯಾಗ. ಇಲ್ಲಿ ಭಾಗ ವಹಿಸಿದ ಸರ್ವರಿಗೂ ಇಹದಲ್ಲಿ ಧರ್ಮಾ



ಹಂಸವಾಹನ

ವಿರುದ್ಧವಾದ ಸರ್ವ ಶ್ರೇಯವೂ, ನಂತರ ಪುನರಾವೃತ್ತಿಯಿಲ್ಲದ ಪರಮಪದವೂ ಲಭಿಸುತ್ತವೆ. ಹಾಗಾಗಿ ಯಾಗಗಳಲ್ಲಿ ಭಗವತ್ ಧ್ಯಾನ ಉತ್ಕೃಷ್ಟವೆಂದೂ, ಉತ್ಸವವು ಪ್ರಮುಖವಾಯಿತು.

ಬ್ರಹ್ಮೋತ್ಸವ ಪದದಲ್ಲಿನ ಬ್ರಹ ನೆಂದರೆ ಪರಮಾತ್ಮನಾದ ವೆಂಕಟಾಚಲಪತಿ. ಅವನಿಗೆ ಮಾಡುವ ಉತ್ಸವ ಬ್ರಹ್ಮೋತ್ಸವ ಎಂದು ವ್ಯಾಖ್ಯಾನಿಸಬಹುದು.



ಸಿಂಹವಾಹನ



ಮುತ್ತಿನಚಪ್ಪರವಾಹನ

ಹೀಗೆಂದಾಗ ಸ್ವಾಮಿ ಸನ್ನಿಧಿಯಲ್ಲಿ ನಡೆಯುವ ನಿತ್ಯಕಲ್ಯಾಣಾದಿಗಳೇ ಅಲ್ಲದೆ ಪವಿತ್ರೋತ್ಸವ ಮೊದಲಾದ ಎಲ್ಲ ಉತ್ಸವಗಳನ್ನೂ ಬ್ರಹ್ಮೋತ್ಸವವೆಂದೇ ಹೇಳಬೇಕು. ಆದರೆ ಅದು ಹಾಗಿಲ್ಲ. ಬ್ರಹ್ಮನೆಂದಲ್ಲಿ ವಿಖಾನಸ ಮುನಿ, ಆತನಿಂದ ರೂಪಕಲ್ಪನೆ



ಕಲ್ಪವೃಕ್ಷ ವಾಹನ

ನಡೆವ ಶ್ರೀನಿವಾಸನ ಉತ್ಸವವಾಗಿ ಬ್ರಹ್ಮೋತ್ಸವವೆಂದು ವ್ಯವಹರಿಸಲಾಗುತ್ತಿದೆ. ವಿಖಾನಸ ಬ್ರಹ್ಮನ ಕಾರ್ಯಾಯ ಪರ್ವಗಳೆಂಬುದನ್ನು ನಂತರ ವಿ[illegible]ಸಲಾಗುತ್ತದೆ. ಈ ಎರಡನೆಯ ವ್ಯಾಖ್ಯೆಯೇ ಸರ್ವಜನಪ್ರಸಿದ್ಧವಾಗಿದೆ. ಶ್ರೀ ವೆಂಕಟೇಶ್ವರ ಅಷ್ಟೋತ್ತರ ಶತನಾಮಗಳಲ್ಲಿ 'ಬ್ರಹ್ಮಾರ್ಕ್ಲಪ್ತೋತ್ಸವ' ಎಂಬ ಶ್ರೀನಿವಾಸನ ಹೆಸರು ಈ ಅರ್ಥವನ್ನು ಬೆಂಬಲಿಸುತ್ತದೆ. ಸ್ವಾಮಿಯ ಬ್ರಹ್ಮೋತ್ಸವದಲ್ಲಿ ನಡೆಯುವ ಮೆರವಣಿಗೆಯ ಮುಂದೆ ಹೋಗುವ ಚಿಕ್ಕ ರಥವು ಉತ್ಸವ ಸ್ಥಾಪಕನಾದ ಬ್ರಹ್ಮನ ರಥನೆಂದೂ, ಅದರಲ್ಲಿ ಆತ ತಿರಸ್ಕರಿಣೀ ವಿದ್ಯೆಯಿಂದ ಇತರರಿಗೆ ಕಾಣದಂತೆ ಉಪಸ್ಥಿತನಾಗಿ ಉತ್ಸವದ ಎಲ್ಲ ರಂಗಗಳನ್ನೂ ಪರ್ಯವೇಕ್ಷಣೆ ಮಾಡುವನೆಂದೂ ಪ್ರಸಿದ್ಧವಾಗಿರುವ ಜನಶ್ರುತಿಯೂ ಇದನ್ನೇ ಬೆಂಬಲಿಸುತ್ತದೆ.

ಆಶ್ವಯುಜ ಮಾಸದ ಶ್ರವಣ ನಕ್ಷತ್ರದ ದಿನ ಬ್ರಹ್ಮೋತ್ಸವದ ಅವಭೃತದ ದಿನ. ಅದಕ್ಕೆ ಮೊದಲ ಒಂಬತ್ತು ದಿನಗಳ ಹಿಂದೆ ದೀಕ್ಷಿತನಾದ ವೈಖಾನಸ ಮಹರ್ಷಿ ಉತ್ಸವಕ್ಕೆ ಅಂಕುರಾರ್ಪಣೆ ಮಾಡುತ್ತಾನೆ. ಹೊಸ ಬಟ್ಟೆಯ ಮೇಲೆ ಗರುಡನನ್ನು ಚಿತ್ರಿಸಿ ಅದಕ್ಕೆ ಪ್ರಾಣಪ್ರತಿಷ್ಠೆ ಮಾಡುವನು. ಸಕಲ ದೇವತೆಗಳನ್ನು ಆಹ್ವಾನಿಸಲು ಭೇರೀ ಪೂಜೆ ಮಾಡುವನು. ಭೇರಿ ಮೊದಲಾದ ಮಂಗಳ ವಾದ್ಯಗಳೊಡನೆ ವಿಮಾನ ಪ್ರಧಾನ ದ್ವಾರದಿಂದ ಆಲಯ ಪ್ರದಕ್ಷಿಣೆ ಮಾಡುತ್ತ ಆಯಾ ದಿಗ್ದೇವತೆಗಳನ್ನೂ ಅವರ ಪರಿವಾರವನ್ನೂ ಅವರವರಿಗೆ ನಿರ್ದೇಶಿಸಿರುವ ಸ್ಥಾನಗಳಲ್ಲಿ ಸನ್ನಿಹಿತರಾಗಬೇಕೆಂದೂ, ಭಗವನ್ನಿಯಮಾನುಸಾರ ರಕ್ಷಣ ಕಾರ್ಯದಲ್ಲಿ ಜಾಗರೂಕರಾಗಿ ಧ್ವಜಾರೋಹಣದಿಂದ ಆರಂಭಿಸಿ ಧ್ವಜಾವರೋಹಣದವರೆಗೆ ಭಗವದುತ್ಸವವನ್ನು ಸೇವಿಸುತ್ತ ಭಗವನ್ನಿವೇದಿತವಾಗಿ ತಾನು ನೀಡುವ ಹವಿಸ್ಸನ್ನು



ಸರ್ವಭೂಪಾಲವಹಾನ

ಸ್ವೀಕರಿಸಿ ತೃಪ್ತರಾಗಬೇಕೆಂದೂ ಆಹ್ವಾನಿಸುವನು. ಭಗವನ್ನಿವೇದಿತ ಹವಿಸ್ಸನ್ನು ಅಷ್ಟೋಪಚಾರಗಳಿಂದ ಆಯಾಯಾ ಸ್ಥಳಗಳಲ್ಲಿ ಇಡುವನು. ಅದನ್ನೇ ಬಲಿಯೆನ್ನುವರು. ಅದಾದನಂತರ ವೇದ ಮಂತ್ರಗಳಿಂದಲೂ ಗದ್ಯಪದ್ಯಗಳಿಂದಲೂ ಎಚ್ಚರಿಸುತ್ತ ಗರುತ್ಮಂತನನ್ನು ದೀಕ್ಷಿತನು ಧ್ವಜದಂಡಾಗ್ರಕ್ಕೆ ಆರೋಹಣ ಮಾಡಿಸುವನು.



ಗರುಡವಾಹನ



ಹನುಮಂತವಾಹನ

ಇದೇ ಧ್ವಜಾರೋಹಣ. ಧ್ವಜಾರೋಹಿಯಾದ ಗರುತ್ಮಂತನಿಗೆ ನಿವೇದಿಸಿದ ಮುದ್ಗಾನ್ನವನ್ನು ಭಕ್ತರು ಭಕ್ತಿ ವಿಶ್ವಾಸಗಳಿಂದ ಪರಿಗ್ರಹಿಸುವರು.

ಈ ಉತ್ಸವದ ಒಂಬತ್ತು ದಿನಗಳಲ್ಲಿ ಶ್ರೀನಿವಾಸನನ್ನು ದ್ವಿಗುಣವಾಗಿ ಆರಾಧಿಸಬೇಕು. ದಿನಕ್ಕೊಂದು ಬಗೆಯ ಪುಷ್ಪವನ್ನು ಮಾಲೆಗಳನ್ನಾಗಿ ಮಾಡಿ ದೇವರನ್ನು ಅಲಂಕರಿಸಬೇಕೆಂದೂ, ವಿವಿಧವಾದ ಸಮಿಧೆಗಳಿಂದ, ಆಜ್ಯಗಳಿಂದ, ಅನ್ನದಿಂದ, ಧಾನ್ಯದಿಂದ ವಿಶೇಷವಾಗಿ ಹೋಮ ಮಾಡಬೇಕೆಂದೂ, ಭಗವನ್ನಾಮ ಸಂಕೀರ್ತನೆ ಮಾಡಬೇಕೆಂದೂ, ಅಪೂರ್ವವಾದ ಅಲಂಕಾರಗಳಿಂದ ಉತ್ಸವ ಮೂರ್ತಿಗಳನ್ನು, ಶೇಷ, ಗರುಡ ಹಂಸ, ಸರ್ವಭೂಪಾಲ ಮೊದಲಾದ ವಿವಿಧ ವಾಹನಗಳ ಮೇಲೆ ಪ್ರತಿದಿನ ಬೆಳಗ್ಗೆ ಹಾಗೂ ರಾತ್ರಿಗಳಲ್ಲಿ ಮೆರವಣಿಗೆ ಮಾಡಿ. ಸ್ವಸ್ತಿ ವಚನ ಮಂಗಳ ತೂರ್ಯ ಘೋಷಗಳಿಂದ ಗ್ರಾಮೋತ್ಸವ ಮಾಡಬೇಕೆಂದೂ, ಭಗವಚ್ಛಾಸ್ತ್ರ ಉದ್ಘೋಷಿಸುತ್ತಿದೆ. ಒಂಬತ್ತನೇ ದಿನ ಅವಭೃತವಾದ ನಂತರ ಧ್ವಜಾವರೋಹಣ ಮಾಡುತ್ತಾರೆ.

ಆಯಾ ವಾಹನಗಳನ್ನೇರಿ ಬರುವ ಅರ್ಚಾರೂಪವನ್ನು ಸೇವಿಸುವ ಭಕ್ತರು ಶ್ರೀನಿವಾಸನು ತನ್ನ ಪರಸ್ವರೂಪದಿಂದ ದರ್ಶನ ನೀಡುತ್ತಿದ್ದಾನೆ ಎಂಬ ಅನುಭೂತಿಯನ್ನು ಹೊಂದುವರು. ಕಣ್ಣುಗಳಲ್ಲಿ ಆನಂದಾಶ್ರುಗಳು ತುಂಬಿ ಸಂತೋಷಾತಿಶಯದಿಂದ ಕಂಠ ರುದ್ಧವಾಗಿ ಅಪ್ರಯತ್ನದಿಂದ 'ಗೋವಿಂದಾ' ಎಂದು ಕೀರ್ತಿಸಿ, ಬ್ರಹ್ಮಾನಂದ ಪರವಶರಾಗುವರು. ಪರಿಪೂರ್ಣ ಶೇಷತ್ವ ವೃತ್ತಿಯಲ್ಲಿ ಭಗವದ್ದಾಸ್ಯವನ್ನೇ ನಡೆಸುತ್ತ ಭಗವದ್ಧ್ಯಾನ ಮಾಡುತ್ತ ಅವನನ್ನು ಸಾಕ್ಷಾತ್ಕರಿಸಿಕೊಂಡ ಶೇಷ, ಗರುಡ, ಹನುಮ ಮೊದಲಾದವರನ್ನು ಆದರ್ಶವಾಗಿ ಹೊಂದಿ ಭಗವತ್ಕೈಂಕರ್ಯ ಮಾಡಲು ಉದ್ಯುಕ್ತರಾಗುವರು.

ಇನ್ನು ವಿಖನಸ ಬ್ರಹ್ಮ ಪದಗಳು ಪರ್ಯಾಯವೆಂಬ ಮಾತು. ಮಹಾವಿಷ್ಣುವು ತನ್ನನ್ನು ಅರ್ಚಿಸುವ ವಿಧಾನವನ್ನು ಸ್ವತಃ ವಿಖನಸ ಮುನಿಗೆ ಹೇಳಿದ. ಶ್ರುತಿಮಯವಾದ ಆ ವಿಧಾನವನ್ನು ಶ್ರುತಿಗಳೊಂದಿಗೆ ಸೋಮಕಾಸುರನು ಅಪಹರಿಸಿದಾಗ ವಿಷ್ಣುವು ಸೋಮಕನನ್ನು ಕೊಂದು ವೇದಗಳನ್ನು ಚತುರ್ಮುಖನಿಗೆ ಮತ್ತೆ ನೀಡಿದನು. ಚತುರ್ಮುಖನು ಪ್ರಾರ್ಥಿಸಲು ತಾನು ಪೂರ್ವದಲ್ಲಿ ವಿಖನಸ ಮುನಿಗೆ ತಿಳಿಸಿಕೊಟ್ಟ ತನ್ನ ಅರ್ಚನಾ ವಿಧಾನವನ್ನು ಸೂಚನಾಪ್ರಾಯವಾಗಿ ಬ್ರಹ್ಮನಿಗೆ ಹೇಳಿದನು. ಬ್ರಹ್ಮನು ಮುನಿವೇಷಧಾರಿಯಾಗಿ ನೈಮಿಶಾರಣ್ಯವನ್ನು ಸೇರಿ ಶುದ್ಧಸತ್ವನಾಗಿ ವಿಷ್ಣುವನ್ನು ಕುರಿತು ತಪವನ್ನೆಸಗಿ ಸಂಕ್ಷಿಪ್ತವಾಗಿ ತಿಳಿದಿದ್ದ ಅರ್ಚನಾ ವಿಧಾನವನ್ನು ಪೂರ್ತಿಯಾಗಿ ಗ್ರಹಿಸಿದನು. ಶುದ್ಧ ಸತ್ವದಿಂದ ವಿಷ್ಣುವನ್ನು ಕುರಿತು ತಪವನ್ನೆಸಗಿದ ಬ್ರಹ್ಮನಿಗೆ ವಿಖನಸಾಭಿಜ್ಞತೆ ಲಭಿಸಿತೆಂದು ಮಹಾಭಾರತ ತಿಳಿಸುತ್ತದೆ. ಈ ರೀತಿಯಾಗಿ ಆ ಅರ್ಚನಾ ವಿಧಾನವು ಮೊದಲ ಹಂತದಲ್ಲಿ ವಿಖಾನಸನಿಂದ ಪ್ರೋಕ್ತವಾಗಿ ಎರಡನೆಯ ಹಂತದಲ್ಲಿ ವಿಖನಸಾಭಿಜ್ಞನಾದ ಬ್ರಹ್ಮನಿಂದ ತಿಳಿಯಲ್ಪಟ್ಟದ್ದು ವೈಖಾನಸಭಗವಚ್ಛಾಸ್ತ್ರ ಎಂದು ಪ್ರಸಿದ್ಧವಾಯಿತು. ಈ ಶಾಸ್ತ್ರ ರೀತಿಯಲ್ಲೇ ತಿರುಮಲೆಯ ಶ್ರೀನಿವಾಸನಿಗೆ ಅರ್ಚನ ಮೊದಲಾದವು, ಪವಿತ್ರೋತ್ಸವ, ಬ್ರಹ್ಮೋತ್ಸವ ಮೊದಲಾದವು ನಡೆಯುತ್ತಿವೆ. ಶುದ್ಧ ಸತ್ವನಾದ ಬ್ರಹ್ಮನಿಂದ ಕಂಡುಕೊಳ್ಳಲ್ಪಟ್ಟ ಆಚರಣೆಯಲ್ಲಿ ತರಲ್ಪಟ್ಟ ಉತ್ಸವ ಬ್ರಹ್ಮೋತ್ಸವವೆಂದು ಪ್ರಖ್ಯಾತವಾಗಿದೆ. ಈ ಬ್ರಹ್ಮೋತ್ಸವವು ತಿರುಮಲೆಯ ಶ್ರೀನಿವಾಸನ ಬ್ರಹ್ಮೋತ್ಸವದಿಂದಲೇ ಆರಂಭವಾಯಿತೆಂಬುದು ವೆಂಕಟೇಶ್ವರ ಸಹಸ್ರನಾಮದ 'ವೈಖಾನಸಮಖಾರಂಭ' ಎಂಬ ಹೆಸರು ಸೂಚಿಸುತ್ತದೆ. ಬ್ರಹ್ಮನಿಗೆ ಉಂಟಾದ ವಿಖಾನಸಾಭಿಜ್ಞತೆಯಿಂದಾಗಿ ವಿಖಾನಸ, ಬ್ರಹ್ಮ ಪದಗಳು ಪರ್ಯಾಯವಾಗಿ ಸ್ಮೃತಿ ಪುರಾಣೇತಿಹಾಸಗಳಲ್ಲಿ ವ್ಯವಹರಿಸಲ್ಪಡುತ್ತಿವೆ.

ಮೂಲ .

ಶ್ರೀ ವಾಡಪಲ್ಲಿ ಜನಾರ್ದನಾಚಾರ್ಯ



ಅಶ್ವವಾಹನ

# ಜಾನಪದ ಸಾಹಿತ್ಯದಲ್ಲಿ ನಾರಿ

ಜಾನಪದದಲ್ಲಿ ಮದುವೆಯೊಂದು ಪ್ರಮುಖವಾದ ಮೌಲ್ಯವಷ್ಟೇ ಅಲ್ಲ, ಹಲವಾರು ಮೌಲ್ಯಗಳ ಆವಿಷ್ಕರಣಕ್ಕೆ ಕಾರಣವಾಗುವ ಮೂಲ ಎನ್ನಬಹುದು. ವಧೂ–ವರರ ತಂದೆ ತಾಯಿ, ಬಳಗದವರೆಲ್ಲರೂ ಕೂಡಿ ನೆರವೇರಿಸುವ ಪವಿತ್ರ ಬಂಧನವೇ ಮದುವೆ. ವಧುವಿನ ತಂದೆ ತಾಯಿ ಬಾಂಧವರೆಲ್ಲರೂ ಕೂಡಿ ವರನ ತಂದೆ ತಾಯಿ, ಬಳಗದವರಿಗೆ, ವರನಿಗೆ, ವಧುವನ್ನು ಒಪ್ಪಿಸುತ್ತಾರೆ.

ಬಂಧು ಬಳಗ ಕೂಡಿ ಮಂದಿ ಮಕ್ಕಳ ಕರೆಸಿ
ಮದವಿ ಮಾಡ್ಯಾರ ಮಗಳೀಗಿ ಸಾಕ್ಷಾತ
ಸಿರಿ ಗೌರಿನ ಕೊಟ್ಟ ಶಿವನಿಗೆ

ಮದುವೆ ಎಂಬುದೊಂದು ಪವಿತ್ರ ಬಂಧನ ಎನ್ನುವ ಮಾತಿಗೆ ಈ ಜನಪದ ಗೀತೆಯೇ ಸಾಕ್ಷಿ, ಆ ಶುಭ ಮುಹೂರ್ತದಲ್ಲಿ ವಧುವರರೀರ್ವರೂ ಸಮಾಜದಲ್ಲಿ ಪವಿತ್ರ ಆತ್ಮಗಳಾಗಿ ಪರಿಗಣಿಸಲ್ಪಡುತ್ತಾರೆ. ಅಂತಲೇ ಗೌರೀಶಿವರಿಗೆ ಹೋಲಿಸಿ ಹಾಡಿದ್ದುಂಟು.

ತಾಯಿಯಾದವಳು ತನ್ನ ಮಗಳನ್ನು ಯಾವ ಪರಿಯಿಂದ ಬೇಡಿಪಡೆದಳೆಂದೂ ಅವಳು ತನ್ನ ಕಂದಮ್ಮನನ್ನು ಹೇಗೆ ಸಾಕಿ ಸಲಹಿ ಜತನ ಮಾಡಿದಳೆಂದೂ ತುಂಬಾ ಮನೋಜ್ಞವಾಗಿ ಹೇಳುತ್ತಾಳೆ.

ಹರನಿಗಾರತಿ ಮಾಡಿ, ಪರಿಪರಿಯಲಿ ಬೇಡಿ
ಏಳು ಮತ್ತೆರಡು ತಿಂಗಳು ಹೊತ್ತು
ಮುತ್ತಿನಂಥ ಮಗಳೀಗಿ ಹೆತ್ತು

ಮುತ್ತಿನಂಥ ಮಗಳನ್ನು ಪಡೆಯಲು ಅವಳು ಒಬ್ಬ ದೇವರನ್ನು ಬೇಡಿಲ್ಲ. ಹನ್ನೆರಡು ದೇವರ ಹರಕೆ ಅವಳದಾಗಿತ್ತು.

ಹನ್ನೆರಡು ದೇವರಿಗೆ ಹರಕೆ ಹೊತ್ತು
ಹಡದೀನ ಚಿನ್ನದ ಗೊಂಬಿಯಂಥ ಮಗಳ ।
ಏಳರಬಿ ಹಾಸೀನ ಏಳರಬಿ ಹೊಚ್ಚೀನ
ಏಳೊರಸ ಮಗಳ ಸಲಹೀನ

ಅಂಥ ಮಗಳನ್ನು ಹಡೆದಿರುವುದು ತನ್ನ ತಾಯ್ತನದ ಸಾರ್ಥಕತೆ ಎಂದವಳ ಅನಿಸಿಕೆ. ಹಂತಹಂತವಾಗಿ ಅವಳು ಮಾಡಿದ ಆರೈಕೆ ಬಗ್ಗೆ ಅವಳ ವರ್ಣನೆ ಹೀಗಿದೆ:

ನೆತ್ತಿಗೆಣ್ಣೆಯ ನೀಡಿ, ಒತ್ತಿ ಕೈ ಮುಂದೂಡಿ,
ಶೀತ ಉಷ್ಣ ಜಲವ ಬೆರೆಸಿ
ಎರೆದು ಎತ್ತಿ ಮಲಗಿಸಿ

ಕೂಸಿನ ಆರೈಕೆ ತುಂಬ ನಾಜೂಕಾಗಿರಬೇಕೆಂದು ಆ ತಾಯಿಯ ಅಂತಃಕರಣದ ತಿಳುವಳಿಕೆ.

ಎಣ್ಣೆ ರೊಟ್ಟೆ ಕೊಟ್ಟು, ಬೆಣ್ಣೆ ರೊಟ್ಟಿ ತಿನಸಿ
ಗಂಧ ಕಸ್ತೂರಿ ಹಚ್ಚಿ ಸಲುವೇನ

ತಾನು ಮಗುವನ್ನು ಅಂಗೈಯಲ್ಲಿಯ ಅರಗಿಣಿಯಂತೆ ಸಾಕಿ ಸಲಹಿದ್ದೇನೆಂದು ಮನದುಂಬಿ ಹೇಳುತ್ತಾಳೆ.

ಹಕ್ಕಿ ಹೆರಳ ಹಾಕಿ, ತಿಪ್ಪಿ ಜೈತಲ ತೀಡಿ
ಕೆಂಬೆಣ್ಣೆ ಕಸ್ತೂರಿ ಫಣೆಗೆ
ಕಾಡಿಗೆ ಎರಡೂ ಕಣ್ಣಿಗೆ

ಎಂದು ಮಗುವಿನ ಮುಖ ಮುದ್ದಾಗಿ ಕಾಣಲು ಹಚ್ಚುವ ಯಾವುದೋ ಚಿಕ್ಕ ಬಟ್ಟಿಗೆ ಕಸ್ತೂರಿಯಂದೇ ಹೊಗಳುತ್ತಾಳೆ. ಸೀರೆ ಕುಪ್ಪಸ ತೊಟ್ಟ ಮಗಳು ತನ್ನಂತೆ ಅವಳೂ ಹೆಣ್ಣೆಂಬ ಹೆಮ್ಮೆಯಿಂದ ಅವಳ ತುಟಿಗಳು ಮಗುವಿನ ಗಲ್ಲಕ್ಕೆ ಒತ್ತಿದಾಗ ಅವಳ ಮಾತೃ ಹೃದಯದ ಮಿಡಿದ,

"ಸಣ್ಣ ಸೀರಿಯನುಡಿಸಿ ಬಣ್ಣದ ಕುಪ್ಪಸ
ತೊಡಿಸಿ"

ಬಾ ಎಂದು ಮಗಳಿಗೆ ಕರೆದು ಎತ್ತಿ ಮುದ್ದಾಡಿ ಸಂತೋಷಿಸುವಳು. ಹೊಸ ಮನೆಗೆ ಮೊದಲಗಿತ್ತಿಯಾಗಿ ಹೋಗುವ ತನ್ನ ಮಗಳ ಊಟ ಉಪಚಾರದ ಪರಿಚಯವನ್ನೂ ಆ ತಾಯಿ ಮರೆಯದೇ ಬೀಗರಿಗೆ ತಿಳಿಸುತ್ತಾಳೆ.

ಸಣ್ಣಕ್ಕಿ ಶ್ಯಾಂವಿಗಿ ಬಾನ, ಬೆಣ್ಣೆ ಕಾಸಿದ
ತುಪ್ಪ
ಕಣ್ಣಾರೆ ನೋಡಿ ನಾ ನೀಡಿ
ತುತ್ತು ಮಾಡಿ ನಾ ಎಣಿಸಿ

ಎಂದು ಬೀಗಿತಿಯ ಮನ ಕರಗುವಂತೆ ಹೇಳುತ್ತಾಳೆ. ತೌರಿನಲ್ಲಿರುವಾಗ ತನ್ನ ಮಗಳು ಎಷ್ಟು ಸುಖವಾಗಿದ್ದಳೋ ಅಷ್ಟೇ ಸುಖ ಅವಳಿಗೆ ಗಂಡನ ಮನೆಯಲ್ಲಿ ಸಿಗಲಿ ಎಂಬುದೇ ಆವಳಾಶೆ.

ಅತ್ತೀನ ಕರೀರ್‍ರೆವ್ವ ಮಾವನ್ನ ಕರಿರ್‍ರೆವ್ವ
ನಾದ್ನೀನ ಕರೀರೆ ಹೊರೆಯಾತ । ಈ ಕೂಸ
ನಮ್ಮಗಳಲ್ಲ ನಿಮ್ಮಗಳಂತ ತಿಳಿರೆವ್ವ

ಅವಳು ತನ್ನ ಮಗಳಲ್ಲವೆಂದು ನಿಮ್ಮ ಮಗಳೇ ಎಂದು ಬೀಗರ ಆಶ್ರಯಕ್ಕೆ ಒಪ್ಪಿಸಿದರೂ ಆ ಮಾತೆಗೆ ಸಮಾಧಾನವಾಗದೆ ತನ್ನ ಮಗಳ ಸ್ವಭಾವ ಹೇಗಿದೆಯೆಂದು ಇದ್ದಕ್ಕಿದ್ದಂತೆ ಹೇಳುತ್ತಾಳೆ.

ಅಡಿ ಬಂದುಂಬಾಕಿ ಕಾಡಿ ಬಂದುಂಬಾಕಿ
ಬೇಡಿದ್ದು ಕೊಡುವುತ ಬಾರಮ್ಮ
ಆಕೀಗ ಸಿಟ್ಟಾಗದಿರಮ್ಮ

ಎಂದು ತನ್ನ ಮಗುವಿನ್ನೂ ಹಸುಗೂಸು ಅವಳಿಗೆ ಯಾವ ಕಷ್ಟ ಪಾಡು ಹಾಕಬೇಡವೆಂದೂ, ಕೋಪಿಸಿಕೊಳ್ಳಬೇಡವೆಂದೂ ಬೀಗಿತಿಗೆ ಹೇಳಿಕೊಳ್ಳುತ್ತಾಳೆ. ಬೀಗಿತಿಯ ಮನದಲ್ಲಿ ಕರುಣೆಯ ರಸ ಚಿಮ್ಮಿಸುಲೊಸಗವೋ, ಅಥವಾ ಹೆಣ್ಣು ಹಡೆದವರ ಒಡಲರಿವು ಆ ಬೀಗಿತಿಗೂ ಆಗಲೆಂದೋ ಹೀಗೆ ಹೇಳುತ್ತಾಳೆ.

ಮತ್ತೆ ಉಂಡಾಳೆಂದು ಮನಸಿಗೆ ತಿಳಿಬ್ಯಾಡ
ಹೊತ್ತಗಳೆಸಬ್ಯಾಡ ತಾಯಿ ।
ನಾರಿ ಬಾಡುವುದು ಎಳೆಗಾಯಿ

–ಸಮಯಕ್ಕೆ ಸರಿಯಾಗಿ ಅವಳ ಊಟೋಪಚಾರ ಆಗಬೇಕೆಂದು, ಇಲ್ಲದಿರೆ ಅವಳು ಎಳೆಗಾಯಿಯಂತೆ ನೊರಟೆ ಬಾಡುವಳೆಂದು ಅಪ್ರತ್ಯಕ್ಷವಾಗಿ ಮಾತೃ ಹೃದಯ ಕೈಮುಗಿಯುತ್ತದೆ,

ಕಳ್ಳ ಗುಣಗಳಿಲ್ಲ ಸುಳ್ಳನಾಡಾಕಿಯಲ್ಲ
ವ್ಯಾಳೆ ವ್ಯಾಳೆಕೆ ಎಣಿಸಿ ಕೆಲಸ
ಮಾಡಿಸಿಕೊಳ್ಳುವ ಸರಸ

ಎಂದು ಹೇಳಿದ ಆ ಮಮತಾಮಯಿ, ತನ್ನ ಮಗಳಿಂದ ಏನಾದರೂ ತಪ್ಪಾದರೆ ಕ್ಷಮಿಸುವವನು ಮನೆಯೊಡೆಯ ಯಜಮಾನನಾದ ಮಾವ, ಮಗಳ ಅಳಿವು–ಉಳಿವು ಅವನ ಕೈಯಲ್ಲಿಯೇ ಇರುವುದೆಂದರಿತು, ಮಗಳ ಮಾವನೆಡೆಗೆ ಮೊಗಮಾಡಿ

ಅಣ್ಣಯ್ಯ ಧನಶೆಟ್ಟಿ, ಕೇಳಿರಿ ಮನಮುಟ್ಟಿ
ಸಣ್ಣಾಕಿ ನನ ಮಗಳು ನಿಮಸೊಸೆ
ನಡೆಸಿಕೊಳ್ಳಿರಿ ಸಂತೋಷದಿ

ಎಂದಾಗ ಯಾವ ಗಂಡು ಹೃದಯ ಕರಗಿ ಕಣ್ಣೀರು ಸುರಿಸಲಿಕ್ಕಿಲ್ಲ!

ಮಗಳನ್ನು ಅತ್ತೆ ಮನೆಗೆ ಕಳಿಸಿ ಪಡಸಾಲೆಯಲ್ಲಿ ಕುಳಿತ ತಪ್ತ ಹೃದಯದ ಆ ಮಾತೆಯ ಮಿಡಿತ.

ಹುಟ್ಟಬಾರದು ಇನ್ನು ಹೊಟ್ಟೆಲಿ ಹೆಣ್ಣೊಂದು
ಕೊಟ್ಟು ಹೋದ ಮ್ಯಾಲೆ,
ಇನ್ನೇನಾದ ನಮಗೆ ।

ತನ್ನ ಹೊಟ್ಟೆಯಲ್ಲಿಯೇ ಹುಟ್ಟಿದ ಕರುಳು ತನ್ನಿಂದ ಬೇರ್ಪಡುವಾಗ ಆಗುವ ನೋವು, ಸಂಕಟ, ದುಃಖವನ್ನನುಭವಿಸಿ, ಮುಂದೆ ಇಂಥ ದುಃಖ ಅನುಭವಿಸಲು ಹೆಣ್ಣು ಹಡೆಯಬಾರದು ಎಂದೆನಿಸುತ್ತದೆ ಅವಳ ಅಳಲು ತುಂಬಿದ ಮನಕ್ಕೆ.

ಕುಮಾರಿ ರಾಧಾ ಜೋಶಿ ಕೋಡ್ಲಿ

ಮದುವೆಯಾದ ನಾರಿ ಗಂಡನ ಮನೆಯಲ್ಲಿ ಗೃಹಿಣಿ ಜೀವನ ಸಾಗಿಸಿದಾಗ ಪ್ರೀತಿಸುವ ಗಂಡ, ಒಳ್ಳೆಯ ಅತ್ತೆ–ಮಾವಂದಿರು, ವಾತ್ಸಲ್ಯದ ಕುಡಿಗಳಂತಿರುವ ತನ್ನ ಕರುಳಿನ ಕಂದಮ್ಮಗಳನ್ನು ನೋಡಿ ತೌರನ್ನು ಕ್ರಮೇಣ ಮರೆಯುತ್ತಾಳೆ. ಇಂಥ ಮನೆ ತನಗೆ ದೊರೆತಿದ್ದು ದೇವನ ಅನುಗ್ರಹವೆಂದೇ ಭಾವಿಸಿ, ತನ್ನ ಸಂಸಾರ ಬೆಲ್ಲದಂತೆ ಮಾಡಿದ ಭಗವಂತನನ್ನು ನಿರ್ಮಲ ಹೃದಯಿಯಾಗಿ ನೆನೆಸುತ್ತಾಳೆ.

ಏಳೂತ ಶಿವಶಿವ, ಮಲಗುತ ಶಿವಶಿವ
ಮಗ್ಗಲೂರಾಗ ಶಿವ ಶಿವ । ನನ ತಂದಿ
ನಿನ ಗ್ಯಾನದಲ್ಲೇ ಬೆಳಗಾಗಿ

ಹೀಗೆ ದೇವರಲ್ಲಿ ಗಾಢವಾದ ನಂಬಿಕೆ, ಶ್ರದ್ಧೆಯನ್ನಿಟ್ಟು ದೈವತ್ವವನ್ನೇ ಸುತ್ತಿಕೊಂಡು, ಹೊತ್ತುಕೊಂಡು ಬದುಕಿದವರು.

ಮಾದೇವ ನಿನ ಹೊರತು ಮತ್ಯಾರ ನಂಬಿಲ್ಲ
ನಾ ಮಾಡೇನೆನುವ ಅಳವಿಲ್ಲ । ಪರಶಿವನೇ
ನೀ ನಡೆಸಿದರುಂಟು ಸರುವೆಲ್ಲ

ಎಂದು ದೇವರ ಸರ್ವಾಂತರ್ಯಾಮಿತ್ವವನ್ನು ನಂಬಿದವಳು "ಹುಟ್ಟಿಸಿದ ದೇವರು ಹುಲ್ಲು ಮೇಯಿಸ್ತಾನೇನ'' ಎನ್ನುವ ಅವಳಲ್ಲಿ ಸಮರ್ಪಣ ಭಾವ ಕಾಣಬಹುದು.

ಮಗಳಾಗಿ ತೌರಿನ ಆಸರೆಯಲ್ಲಿ, ಹೆಂಡತಿಯಾಗಿ ಗಂಡನ ಅಧೀನದಲ್ಲಿ, ತಾಯಿಯಾಗಿ ಮಕ್ಕಳ ಮರ್ಜಿಯಲ್ಲಿ, ಜೀವನ ಸಾಗಿಸುತ್ತಿರುವ ಅವಳು ಹೇಳುವ ಬಾಳಿನ ತಿರುಳೆಂದರೆ,

ಮಂದಿ ಮಕ್ಕಳವಾಗ ಛಂದಾಗಿ ಇರಬೇಕ
ನಂದಿಯ ಶಿವನ ದಯದಿಂದ । ಶಿವಬಂದು
ಒಯ್ಯಾಗ । ಮಂದಿ ಬಾಯಾಗ ಇರಬೇಕ

ಸಂಸಾರದ ತಪಸ್ಸು ನಡೆಸಿದ ಅವಳ ತಾತ್ವಿಕ ನುಡಿಯೆಂದರೆ ಶಿವನಿಗೆ ಬೇಕಾಗುವಂತೆ ಬದುಕುವುದು, ಅದುವೇ ಸಾರ್ಥಕ ಬಾಳು ಎಂಬುದು.

ಪಾತಿವ್ರತ್ಯ ತರುವ ಪೂಜ್ಯತೆಯೇ ಮುತ್ತೈದೆತನ. ಮಾಂಗಲ್ಯ, ಕುಂಕುಮ, ಬಳೆ, ಮೂಗುತಿ, ಕಾಲುಂಗುರಗಳಾದ ಪಂಚ ಪವಿತ್ರ ಒಡವೆಗಳಿಂದ ಶೋಭಿಸುವ ಮುತ್ತೈದೆ ಮುಂದಿರದ ಶುಭ ಕಾರ್ಯಗಳಿಲ್ಲ, ಮುತ್ತೈದೆ ಮಾಡದ ಮಂಗಲಕಾರ್ಯಗಳಿಲ್ಲ. ಅಖಂಡ ಮುತ್ತೈದೆಯಾಗಿ ಬದುಕಬೇಕೆಂಬ ಆಶೆ ಪ್ರತಿಯೊಬ್ಬ ಗೃಹಿಣಿಗೂ ಇರುತ್ತದೆ. ಆಗ ತನ್ನ ಮುತ್ತೈದೆತನಕ್ಕೆ ಕಾರಣನಾದ ಪತಿಯನ್ನು ಚೆನ್ನಾಗಿಟ್ಟಿರಲಿ ಎಂದು ಹಗಲಿರುಳು ದೇವರಲ್ಲಿ ಅವಳು ಕೇಳಿಕೊಳ್ಳುವ ಪ್ರಾರ್ಥನೆಯಾಗಿರುತ್ತದೆ.

ಅತ್ತಿ ಮಾವರ ಹೊಟ್ಟೆ ತಣ್ಣಗೆ ಇರಲಿ,
ಮುತ್ತೈದಿತನ ನನಗಿರಲಿ । ಮ್ಯಾಲಿನ
ಮುಕ್ಕಣ್ಣ ಶಿವನ ದಯವಿರಲಿ

ಎಂದು ದೇವರ ಕೃಪೆಯಿಂದ ಅತ್ತೆ ಮಾವಂದಿರ ಹೊಟ್ಟೆ ತಣ್ಣಗಿರಲಿ ಎಂದರೆ ಆವರ ಮಗನ ಕೂದಲೂ ಕೊಂಕದಿರಲಿ, ಯಾವ ಬಾಧೆಯೂ ಅತನಿಗೆ ತಾಗದಿರಲೆಂದು ಅವಳ ಮನದ ಕಳವಳ.

ನೆತ್ತಿಯ ಮ್ಯಾಲೈದು ನೆನಿದಂಡಿ ಕಟಕೊಂಡು
ಮುತ್ತೈದಿ ಸಾವ ನನಗಿರಲಿ ।
ಮಾರಾಯರ ಮುಂದ ಮರಣ

ಎಂದು ಗಂಡ ಸಾವಿನ ಸನಿಹದಲ್ಲಿದ್ದಾಗ್ಯೂ ಅವನಿಗಿಂತಲೂ ಮೊದಲು ತಾನು ಆತ್ಮಾರ್ಪಣೆ ಮಾಡಿಕೊಳ್ಳುವ ಮನೋಭಾವ ಅವಳದಾಗಿದೆ.

ಮಕ್ಕಳಿಲ್ಲದ ಬದುಕು ಪೂರ್ಣವಾಗದು. ಮಾತೃಮೂರ್ತಿಯಾಗಲು ಪ್ರತಿ ಹೆಂಗಸೂ ಆಶಿಸುತ್ತಾಳೆ. ಆದು ದೊರೆಯದಾಗ ಅವಳ ನೋವು ಹೇಳತೀರದು.

ಬಾಲಕರಿಲ್ಲದ ಬಾಲಿದ್ಯಾತರ ಜನ್ಮ
ಬಾಡಿಗಿ ಎತ್ತು ದುಡಿದಂಗ । ಬಾಳೆಲೆಯ
ಹಾಸಿಂಡು ಬೀಸಿ ಒಗದಂಗ

ತನ್ನ ಬದುಕೊಂದು ಅರ್ಥಹೀನ, ಗಾಣದೆತ್ತಿನ ಜೀವನ, ನಿರುಪಯೋಗಿ ಎಂದೆಲ್ಲ ಭಾವಿಸುವಳು.

ಕಂದನ ಕೊಡು ಶಿವನೆ ಬಂಧನ ಬಿಡಲಾರೆ
ಹಂಗೀನ ಬಾನ ಉಣಲಾರೆ । ಮರ್ತ್ಯದಾಗ
ಬಂಜೆಂಬ ಶಬುದ ಹೊರಲಾರೆ

ಎಂದು ತನ್ನ ದೈನ್ಯ ಬಾಳಿನ ವ್ಯರ್ಥ ಜೀವನ ಸಾರ್ಥಕಗೊಳಿಸುವಂತೆ ಕೇಳಿಕೊಳ್ಳುತ್ತಾಳೆ, ಸಮಾಜವೊಂದೆ 'ಬಂಜೆಯೆಂದು' ಬಿಟ್ಟು ಮಾಡಿ ತನ್ನನ್ನು ತೋರಿಸುತ್ತಿದೆಯಲ್ಲದೆ, ಮೂಕ ಪ್ರಾಣಿಗಳಾದ ಹಕ್ಕಿ ಪಕ್ಷಿಗಳು ಕೂಡ ತನಗೆ ಬಂಜೆ ಎಂದು ಹೀಯಾಳಿಸುತ್ತವೆಯೆಂದು ಅವಳ ಪರಿತಪ್ತ ಹೃದಯದ ಭಾವ.

"ಬಂಜಿಯ ಮನಿ ಮುಂದ ಅಂಜೂರಿ
ಗಿಡಹುಟ್ಟಿ,
ಟೊಂಗಿ ಟೊಂಗಿಗೆಲ್ಲ ಗಿಣಿ ಕುತ್ತು । ಹೇಳ್ಯಾವ
ಬಂಜಿ ನಿನ ಬದುಕು ಹೆರವರಿಗೆ

ಸಮಾಜದಲ್ಲಿ ಯಾವುದಿದ್ದರೂ ದುಃಖವೇ, ಮಕ್ಕಳಿರದಿದ್ದರೆ ಬಂಜೆಯೆಂಬ ನಿಂದನೆ, ಮಕ್ಕಳಿದ್ದರೆ ಮುಪ್ಪಿನ ಕಾಲಕ್ಕೆ ಮನಕ್ಕೆ ಚಿಂತೆ. "ಇಲ್ರೆ ಮಂದಿ ಕಾಟ, ಇದ್ರ ಮನದ ಕಾಟ'' ಎನ್ನುವ ಗಾದೆಯ ಹಾಗೆ ತನ್ನ ಸರ್ವಸ್ವವಾದ ತನು, ಮನ ಧನಗಳನ್ನು ಸವೆಸಿ ಸಂಸಾರದ ಸುಂದರ ಗೋಪುರ ನಿರ್ಮಿಸಿ ನಿಶ್ಯಕ್ತಳಾದಾಗ, ಅವಳಿಗೆ ಯೌವನವಡಗಿ ಮುಪ್ಪಡರುವಾಗ, ತನ್ನ ಮನನೇ ತನಗೆ ಅಂತಃಕರಣದಿಂದ ಕಾಣದಿದ್ದಾಗ ಆವಳ ಮಾತೃಹೃದಯ ರೋದಿಸುತ್ತದೆ.

ಕುಟ್ಟಿ ಬೀಸಿ ನನ್ನ ಹೊಟ್ಟಿ ಹೊರದೆನವ್ವ
ರಟ್ಟೀಗಿ ಶಿವನ ದಯೆಯಿರಲಿ । ನಾನಿಲ್ಲಿ
ರಿಣಗೂಳ ತಿಂದ ಇರಲಾರೆ

ಎಂದು ಮಗನ ಮಮತೆಯು ಸಂಕೋಲೆ ತೆಗೆದೊಗೆಯಲೂ ಸಿದ್ಧವಾಗುತ್ತದೆ, ಅವಳ ದುರ್ಬಲ ಹೃದಯ, ಆ ಒಂದು ಕ್ಷಣದಲ್ಲಿ.

ಹೀಗೆ ಜನಪದ ಬದುಕಿನಲ್ಲಿ ಪ್ರತಿ ಮಗ್ಗಲಿಗೂ ಹಾಸು ಹೊಕ್ಕಾಗಿ ನಡೆದವಳು ಹೆಣ್ಣು, ಬಾಳಿಗೆ ಹತ್ತಿರವಾದ, ಮಾನವೀಯ ಮೌಲ್ಯಗಳೆನಿಸಿರುವ ತಾತ್ವಿಕ ವಿಚಾರಗಳನ್ನು ಅವಳು ಬೀಸು ಕುಟ್ಟುವ ಹಾಡಿನ ಮುಖಾಂತರ ಹೇಳುತ್ತಾಳೆ.

ಉಂಗರ ಉಡದಾರ ಮುರಿದರ ಮಾಡಿಸ
ಬಹುದು
ಹೆಂಡತಿ ಸತ್ತರ ತರಬಹುದು । ಹಡೆದಂತ
ತಂದೆ ತಾಯೆಲ್ಲಿ ಸಿಕ್ಯಾರ

ಎಂದು ಜಗತ್ತಿನಲ್ಲಿಯೇ ಪರಮ ಪೂಜ್ಯವೆನಿಸಿರುವ ಎರಡು ವಸ್ತುವೆಂದರೆ ತಂದೆ ತಾಯಿ ಎಂದು ಉದ್ಘೋಷಿಸಿದ್ದಾಳೆ.

ತನ್ನ ಗಂಡನ ಮನೆಯ ಸಾರ್ಥಕ್ಯವನ್ನು ಆದರ ಮಹತಿಯನ್ನು, ಅದರ ಶ್ರೇಷ್ಠತೆಯನ್ನು, ಅದರ ವೈಶಿಷ್ಟ್ಯವನ್ನು, ಸಮಾಜ ಅದಕ್ಕೆ ನೀಡುತ್ತಿರುವ ಮನ್ನಣೆಯನ್ನು ಹೀಗೆ ಉಸುರಿದ್ದಾಳೆ.

ಒಗೆತನ ಇದ್ದರ ಜಗವೆಲ್ಲ ಒಳ್ಳೆಕ್ಕಿ
ಒಗೆತನಗೆಟ್ಟು ನೆಲೆಗೆಟ್ಟು । ಇದ್ದರ
ಒಡ ಹುಟ್ಟಿದಣ್ಣ ವೈರಾದ

ಒಂದು ವೇಳೆ ಒಗೆತನ ತೂಕ ತಪ್ಪಿದರೆ ಸಮಾಜ ಒತ್ತಟ್ಟಿಗಿರಲಿ, ಒಡಹುಟ್ಟಿದವರೇ ವೈರಿಗಳಾಗುವ ಸಂಭವವುಂಟು. ಅದಕ್ಕಾಗಿ ಕಾಳಜಿಯಿಂದ ನೀತಿಪೂರ್ವಕ ಒಗೆತನ ನಡೆಸಬೇಕೆಂದು ಅವಳ ಉಪದೇಶ.

ದಿನವಿಡೀ ಮನೆಗೆಲಸ ಮಾಡಿ ದಣಿದ ಅವಳಿಗೆ ತನ್ನ ಕಂದ ಆಡಿ ಬಂದು ತೊಡೆಯಲ್ಲಿ ಓಲಾಡಿದರೆ ಹಗಲು ಹನ್ನೆರಡು ತಾಸು ಮಾಡಿದ ಆಯಾಸವೆಲ್ಲ ಆರಿ ಹೋಯಿತೆಂಬ ಅವಳ ಅನುಭವದ ಆಡುನುಡಿ.

ಬಡತನ ಬಂದರ ಬಡಿಬ್ಯಾಡ ಮಕ್ಕಳ್ನ
ಆಡ್ಯಾಡಿ ಬಂದು ತೊಡಿ ಮ್ಯಾಲ । ಮಲಗಿದರ
ಬಂದ ಬಡತನ ಬಯಲಾತು

ಎಂದು ಮಕ್ಕಳೇ ತನ್ನ ಸಿರಿ ಸಂಪತ್ತೆಂದ ತಿಳಿಯುವವಳಲ್ಲದೆ ಬಡತನದ ಸ್ಥಿತಿಯಲ್ಲಿಯೂ ಮಕ್ಕಳ ಮುಖ ನೋಡಿ ಬಡತನದ ಬೇಗುದಿ ಮರೆಯುವಳು. ಅಲ್ಲದೆ ತನ್ನ ಮಗನ ಕಿರಿಕಿರಿಯನ್ನೂ ಅವಳು ಸಹೃದಯದಿಂದ ಸ್ವಾಗತಿಸುತ್ತಾಳೆ. ಮಗುವಿನ ಆಕ್ರಂದನ ಕೂಡ ಅವಳಿಗೆ ಪ್ರಿಯವಾದುದೇ.

( 38ನೇ ಪುಟ ನೋಡಿ )

# ಗಾಂಧೀಜಿ ದೃಷ್ಟಿಯಲ್ಲಿ ಮಹಿಳೆ

ಭಾರತೀಯ ಮಹಾಚಿಂತಕರಲ್ಲಿ ಮಹಾತ್ಮಾ ಗಾಂಧೀಜಿಯವರನ್ನು ಅಗ್ರಗಣ್ಯರೆಂದು ಪ್ರಪಂಚವೇ ಕೊಂಡಾಡುತ್ತಿದೆ. ಗಾಂಧೀಜಿಯವರು ತಮ್ಮ ಜೀವಿತ ಕಾಲದಲ್ಲಿ ಮಹಿಳೆಯರಿಗೆ ಕೊಟ್ಟಿದ್ದ ಪ್ರಾಶಸ್ತ್ಯ ಅನುಪಮವಾದುದು. ಭಗವಾನ್ ರಾಮಕೃಷ್ಣ ಪರಮಹಂಸರ ಆದರ್ಶವನ್ನು ಮನಗಂಡಿದ್ದ ಮಹಾತ್ಮಾಜೀ ಅಜ್ಞಾನದ ಅಂಧಕಾರದಲ್ಲಿ ತೊಳಲಾಡುತ್ತಿದ್ದ ಭಾರತೀಯ ಸ್ತ್ರೀಯನ್ನು ಜ್ಞಾನದ ಪ್ರಕಾಶಕ್ಕೆ ತರಲು ತುಂಬಾ ಶ್ರಮಿಸಿದರು.

ಶ್ರೀ ವೈಷ್ಣವ ಸಂಪ್ರದಾಯದಲ್ಲಿ ಮಾತೆಗೆ ಇರುವ ಸ್ಥಾನ ಅಗ್ರವಾದದ್ದು. ದೇವಾಧಿದೇವತೆಗಳಲ್ಲೂ ಸಹ ಮಾತೃಸ್ಥಾನಕ್ಕೆ ಆದ್ಯತೆ ಇದೆ. ಇಂದು ಸಹ ದೇವಾಲಯಗಳಲ್ಲಿ ಶ್ರೀ ವೈಷ್ಣವ ಭಕ್ತರು ಮೊದಲಿಗೆ ತಾಯಿಯವರ ದರ್ಶನವನ್ನು ಮಾಡಿ ಅನಂತರ ದೇವ ದರ್ಶನವನ್ನು ಮಾಡುವುದು ಪದ್ಧತಿ. ಇದರಿಂದ ಭಾರತೀಯರಲ್ಲಿ ಮಹಿಳೆಗೆ ಎಂಥ ಪೂಜ್ಯ ಭಾವನೆ ಇದ್ದಿತು ಎಂಬುದು ಸ್ಪಷ್ಟವಾಗುತ್ತದೆ.

ಗಾಂಧೀಜಿಯವರು ಮಹಿಳೆಯು ಗೃಹದ ಅಧಿದೇವತೆ ಎಂಬುವುದನ್ನು ಸಾರಿದ್ದರು. ಭಾರತೀಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸ್ತ್ರೀ ತನ್ನ ಅಮೂಲ್ಯ ಕಾಣಿಕೆಯನ್ನು ಸಲ್ಲಿಸತಕ್ಕದ್ದೆಂಬುದು ಅವರ ಅಭಿಪ್ರಾಯವಾಗಿತ್ತು. ದೇಶದ ಲಕ್ಷಾಂತರ ಸ್ತ್ರೀಯರು ಗೃಹಕೃತ್ಯವನ್ನು ತೊರೆದು ಕೆಲಸ ಮಾಡಿ ಹಣ ಸಂಪಾದಿಸುವುದು ಗಾಂಧೀಜಿಯವರ ಅಭಿಪ್ರಾಯದಲ್ಲಿ ಅಷ್ಟಾಗಿ ಒಳಿತು ಎನ್ನಿಸಿರಲಿಲ್ಲ. ಸ್ತ್ರೀಯರು ತಾವಾಗಿಯೇ ಇಚ್ಛೆಪಟ್ಟು ಗೃಹಕೃತ್ಯದ ಜತೆಗೆ ಹೊಲಗದ್ದೆಗಳಲ್ಲಿ ಕೆಲಸ ಮಾಡುವುದು ಅವರಿಗೆ ಸರಿಯೆನ್ನಿಸಿತ್ತು. ಅವರ ದೃಷ್ಟಿಯಲ್ಲಿ ಸ್ತ್ರೀಯ ಮುಖ್ಯ ಕಸಬು ಗೃಹಕೃತ್ಯ; ಅನಂತರದ್ದು ಹೊರಗಿನ ಕೆಲಸ.

ಬಾಲ್ಯ ವಿವಾಹದ ಬಗ್ಗೆ ಗಾಂಧೀಜಿಯವರ ಅಭಿಪ್ರಾಯ ಸ್ವಲ್ಪ ಮಟ್ಟಿಗೆ ವಿಚಿತ್ರವಾಗಿತ್ತು (ಅವರು ಜೀವಿಸಿದ್ದ ಕಾಲದಲ್ಲಿ ಅದು ಸರಿಯೆನ್ನಿಸಿದ್ದರಬಹುದು.) ಒಟ್ಟಾರೆ ಅವರ ಅಭಿಪ್ರಾಯದಲ್ಲಿ ಬಾಲ್ಯ ವಿವಾಹ ಬಹು ದೊಡ್ಡ ಅಭಿಶಾಪ, ಬಾಲ ವಿಧವೆಯರು ಇರಲೇ-ಬಾರದೆಂಬುದು ಅವರ ಅಭಿಪ್ರಾಯ. ಜತೆಗೆ ಅಸಮ ವಯಸ್ಕ ವಿವಾಹಗಳನ್ನು ಕುರಿತ ಅವರ ಅಭಿಪ್ರಾಯ ಎಂಥವರೂ ಯೋಚಿಸತಕ್ಕಂತೆ ಇದ್ದಿತು.

ಒಬ್ಬ ಅವರಲ್ಲಿಗೆ ಬಂದು ತನ್ನ ಸಮಸ್ಯೆಯನ್ನು ಬಿಚ್ಚಿಟ್ಟ "ನನಗೆ 15 ವರ್ಷ-ನನ್ನ ಹೆಂಡತಿ 17 ವರ್ಷದವಳು. ಇದು ನನಗೊಂದು ದೊಡ್ಡ ಸಮಸ್ಯೆಯಾಗಿದೆ. ಈ ಬಗ್ಗೆ ನನ್ನ ಅತೃಪ್ತಿಯನ್ನು ವ್ಯಕ್ತ ಪಡಿಸಿದಾಗಲೆಲ್ಲಾ ನನ್ನ ತಂದೆ ಹಾಗೂ ಹೆಣ್ಣು ಕೊಟ್ಟ ಮಾವ ಇಬ್ಬರೂ ನನ್ನನ್ನು ಬೈದು ಹಂಗಿಸುತ್ತಿದ್ದಾರೆ. ನಾನು ಹಣವಂತನೆಂದು ಹಣದ ಆಸೆಗಾಗಿ ನನ್ನ ಮಾವ ತನ್ನ ಮಗಳನ್ನು ನನಗೆ ಕೊಟ್ಟು ವಿವಾಹ ಮಾಡಿದ. ಈ ವಿವಾಹವಾದದ್ದು ನನ್ನ ತೀರ ಚಿಕ್ಕ ವಯಸ್ಸಿನಲ್ಲಿ. ನಾನೇನು ಮಾಡಲಿ". ಗಾಂಧೀಜಿಯವರು 'ಸಪ್ತಪದಿ'ಯ ಅರ್ಥವನ್ನು ಅವನಿಗೆ ವಿವರಿಸಿದರು. ಇಂಥ ಪ್ರಸಂಗಗಳಲ್ಲಿ ಗಾಂಧೀಜಿ ಸಮಸ್ಯೆಯು ಜಟಿಲವಾಗಲಿಕ್ಕೆ ಆಸ್ಪದ ಕೊಡುತ್ತಿರಲಿಲ್ಲ.

ಗಾಂಧೀಜಿ ತಮ್ಮ ಜೀವನದಲ್ಲಿ ಸ್ತ್ರೀಗೆ ಅತ್ಯಂತ ಗೌರವವನ್ನು ನೀಡಿದ್ದರು. ಕಸ್ತೂರಬಾ ಗಾಂಧಿಯವರನ್ನು ತುಂಬಾ ಗೌರವ ಶ್ರದ್ಧೆಯಿಂದ ಕಾಣುತ್ತಿದ್ದರು. ಸ್ತ್ರೀ ಎಂದರೆ ಸೀತೆಗೆ ಸಮಾನ. ಅವರ ದೃಷ್ಟಿಯಲ್ಲಿ ಪ್ರತಿಯೊಬ್ಬ ಪುರುಷ ಶ್ರೀರಾಮನಾಗಬೇಕು. ಸೀತೆ ರಾಮನ ಗುಲಾಮಳಾಗಿರಲಿಲ್ಲ. ಗಂಡ ಹೆಂಡಿರಲ್ಲಿ ಇಬ್ಬರೂ ಪರಸ್ಪರ ಸ್ನೇಹದಿಂದ ಇರಬೇಕು, ಸರಿಸಮಾನವಾಗಿರಬೇಕು ಎಂಬುದು ಅವರ ತರ್ಕ. ಜೀವನದಲ್ಲಿ ಅವರಿಬ್ಬರೂ ಸರಿಸಮಾನರು. ಆದರೆ ಇಂದು ಪತಿ ತನ್ನ ಪತ್ನಿಯನ್ನು ತನ್ನ ಆಸ್ತಿ ಎಂದು ಭಾವಿಸುತ್ತಾನೆ. ಇದು ಸರಿಯಲ್ಲ, ಬಹಳ ಹಿಂದೆಯೇ ಭಕ್ತ ಮೀರಾಬಾಯಿ ತಾನು ಯಾರೊಬ್ಬರ ಆಸ್ತಿಯಲ್ಲ ಎಂಬುದನ್ನು ಸಿದ್ಧಮಾಡಿ ತೋರಿಸಿದ್ದಾಳೆ.

ಗಾಂಧೀಜಿಗೆ ಕೆಲವರು ಸ್ತ್ರೀಯ ಕರ್ತೃತ್ವ ಶಕ್ತಿಯ ಬಗ್ಗೆ ಅನೇಕ ಪ್ರಶ್ನೆಗಳನ್ನು ಕೇಳಿದ್ದುಂಟು, ಕೆಲವು ವಿಚಿತ್ರವಾಗಿರುತ್ತಿದ್ದವು. ಗಂಡ ಮಾಂಸಾಹಾರಿ; ಹೆಂಡತಿ ಅದನ್ನು ಒಪ್ಪದವಳು. ಆಕೆ ಗಂಡನಿಗೆ ಮಾಂಸಾಹಾರವನ್ನು ತಯಾರಿಸಿ ಬಡಿಸಬೇಕೇ? ಜೊತೆಗೆ ಗಂಡನ ಬಲವಂತಕ್ಕೆ ಆಕೆ ಮಾಂಸಾಹಾರಿಯಾಗಬೇಕೇ? ಇದಕ್ಕೆ ಗಾಂಧೀಜಿ ಕೊಟ್ಟ ಉತ್ತರ ಬಹಳ ಸರಳವಾದದ್ದು. ಪತ್ನಿಯಾದವಳು ಗಂಡನನ್ನು ಒಲಿಸಿಕೊಂಡು ಸಸ್ಯಾಹಾರಿಯನ್ನಾಗಿ ಮಾಡುವುದು ಅತ್ಯುತ್ತಮ. ಹಿಂದೂ ಧರ್ಮದಲ್ಲಿ ಗಂಡ ಹೆಂಡತಿಯರಿಬ್ಬರೂ ಸರಿಸಮಾನರು ಎಂಬುದು ಎಂದೋ ಸಿದ್ಧವಾಗಿದೆ.

ಸ್ತ್ರೀ ಎಂದರೆ ಅವಳಿಗೆ ಆಭರಣಗಳ ಆಸೆ ಎಂಬುದು ಸ್ವಾಭಾವಿಕವಾದದ್ದು, ಗಾಂಧೀಜಿ ಸ್ತ್ರೀಯರು ಚಿನ್ನ ಮತ್ತು ಭೋಗ ವಸ್ತುಗಳಿಂದ ದೂರವಿರಬೇಕೆಂದು ಒತ್ತಿ ಹೇಳುತ್ತಿದ್ದರು. ಎಷ್ಟೋ ಬಾರಿ ತಮ್ಮ ಪತ್ನಿ ಕಸ್ತೂರಬಾ ಅವರನ್ನು ಆಭರಣಗಳ ಆಸೆಯಿಂದ ದೂರವಿರಿಸಲು ಪ್ರಯತ್ನಿಸಿದರು, ಆ ಯತ್ನದಲ್ಲಿ ಸಫಲರೂ ಆಗಿದ್ದರು.

ಸ್ತ್ರೀ ಎಂದರೆ ನಮ್ಮ ದೇಶದಲ್ಲಿ ಅದೊಂದು ಭೋಗ ವಸ್ತು ಎಂಬ ಕಟ್ಟ

**ಶ್ರೀ ನುಗ್ಗೇಹಳ್ಳಿ ರಂಗನಾಥ**

ಭಾವನೆ ಜನ ಜನಿತವಾಗಿದೆ. ಅವಳು ಪುರುಷನ ಮುಂದೆ ಹೋಗಲು ಸಾಮಾನ್ಯವಾಗಿ ಜನ ಇಚ್ಛಿಸುತ್ತಿರಲಿಲ್ಲ. ಇದು ಗಾಂಧೀಜಿಯವರ ಮನಸ್ಸಿಗೆ ತುಂಬಾ ನೋವನ್ನುಂಟು ಮಾಡಿತ್ತು. ಗಾಂಧೀಜಿಯವರು ಬಂಗಾಳ, ಬಿಹಾರ ಮತ್ತು ಉತ್ತರ ಪ್ರದೇಶಗಳಿಗೆ ಹೋದಾಗಲೆಲ್ಲಾ ಈ ಪರದಾ ಪದ್ಧತಿಯನ್ನು ಕಂಡು ನೊಂದು ಜನರಿಗೆ ಬುದ್ಧಿ ಹೇಳುತ್ತಿದ್ದುದುಂಟು.

ಅವರ ಅಭಿಪ್ರಾಯದಲ್ಲಿ "ವಿಧವಾ ವಿವಾಹ" ಕೆಲವು ಸಂದರ್ಭಗಳಲ್ಲಿ ಸರಿಯೆನಿಸಿದ್ದುಂಟು. ಆದರೆ ನಮ್ಮ ಯುವಕರು ಪವಿತ್ರರಾದರೆ ಮಾತ್ರ ಇದು ಸರಿ ಇಲ್ಲದಿದ್ದರೆ ಇದರಿಂದ ಅನಾಹುತಗಳು ಸಂಭವಿಸುತ್ತವೆಯೇ ವಿ ನ ಹ ಯಾ ರಿ ಗೂ ಪ್ರಯೋಜನವಾಗದು.

ಸಹಗಮನದ ಘೋರ ಪದ್ಧತಿಯನ್ನು ಖಂಡತುಂಡವಾಗಿ ಅವರು ವಿರೋಧಿಸಿದರು. ಈ 20ನೇಯ ಶತಮಾನದಲ್ಲೂ ಸಹ ಉತ್ತರ ಪ್ರದೇಶದ ಕೆಲವು ಕಡೆಗಳಲ್ಲಿ ಸ್ತ್ರೀಯನ್ನು ಸತ್ತ ಗಂಡನೊಂದಿಗೆ ಸುಡುವ ಪ್ರಕರಣಗಳು ಬೆಳಕಿಗೆ ಬಂದಿವೆ. ಅವರ ಅಭಿಪ್ರಾಯದಲ್ಲಿ ಸ್ತ್ರೀ ಆದವಳು ತನ್ನ ಪತಿಯ ಬಗ್ಗೆ ಇರುವ ಅತಿಯಾದ ಪ್ರೇಮದಿಂದ ಕೂಡ ಆತ್ಮಾಹುತಿ ಮಾಡಿಕೊಳ್ಳುವುದೂ ತಪ್ಪು. ಮದುವೆ ಕೇವಲ ಎರಡು ದೇಹಗಳ ಮಿಲನವಲ್ಲ, ಅದು ಆತ್ಮಗಳ ಮಿಲನ. ಭಕ್ತ ಮೀರಾ ದೇವನನ್ನೇ ಮದುವೆಯಾದಳು. ಆಂಡಾಳ್ ಸಹ. ಅಕ್ಕ ಮಹಾದೇವಿ ಮಿಕ್ಕವರಂತೆಯೇ ಭೌತಿಕವನ್ನು ತೊರೆದು ಅಧ್ಯಾತ್ಮಿಕ ಪತಿಯನ್ನು ಆರಿಸಿಕೊಂಡಿದ್ದರು. ಭಾರತಕ್ಕೆ ಅಂತಹ ಸ್ತ್ರೀಯರ ಬೇಕಾಗಿದ್ದಾರೆ ಎಂಬುದು ಮಹಾತ್ಮರ ಆಶಯವಾಗಿತ್ತು.

ಗಾಂಧೀಜಿಯವರ ದೃಷ್ಟಿಯಲ್ಲಿ ಸ್ತ್ರೀ ಒಂದು ಅಲೌಕಿಕ ಶಕ್ತಿ. ಲೌಕಿಕ ಮತ್ತು ಅಲೌಕಿಕ ಎರಡೂ ಕಡೆ ಅವಳು ಅರುಂಧತಿಯಂತೆ. ಆಕೆಹಿಂದು ಉಜ್ವಲ ನಕ್ಷತ್ರ. ಮದುವೆಯಾದ ತರುಣರಲ್ಲಿ ಗಂಡ ತನ್ನ ಪತ್ನಿಗೆ ಅರುಂಧತಿ ನಕ್ಷತ್ರವನ್ನು ತೋರಿಸಿ;

"ಸಪ್ತಋಷಯಃ ಪ್ರಥಮಾಂ
ಕೃತ್ತಿಕಾನಾಮ್
ಅರುಂಧತೀಮ್ ಯತ್ ಧ್ರುವತಾಮ್
ಹ ನಿನ್ಯುಹು
ಶತ ಕೃತ್ತಿಕಾಕಿ ಮುಖ್ಯ – ಯೋಗಂ
ವಾಹಂತೇ
ಯಾಮ್ ಅಸ್ಮಾಕಾದಿ ಯದತ್ವ
ಅಸ್ತ್ರವಿರಾ

– ಎಂಬ ಮಂತ್ರವನ್ನು ಜಪಿಸುತ್ತಾನೆ. ಮಂತ್ರ ಇಬ್ಬರಿಗೂ ಅನ್ವಯವಾಗುತ್ತದೆ. ಸ್ತ್ರೀ ಧ್ರುವತ್ವದ ಅನಂತತ್ವ ಸ್ತ್ರೀಯ ದಿವ್ಯತೆ ಗಂಗೆಯ ಪವಿತ್ರತೆಗೆ ಸಮ. ಅಜ್ಞಾನದ ಕೊಳೆಯನ್ನು ತೊಳೆಯುವ ದಿವ್ಯ ಪೀಯೂಷ.

---

(16ನೇ ಪುಟದಿಂದ)

ಮನೆಯವರೆಲ್ಲಾ ಹೋಗುತ್ತಿದ್ದರಿಂದ ತಾನೂ ಹೋಗಬೇಕೆಂದೂ ಅದಕ್ಕಾಗಿ ತನಗೆ ಸ್ವಲ್ಪ ಹಣದ ಅಗತ್ಯವಿದೆಯೆಂದೂ ತಿಳಿಸಿದಳು. ಸ್ವತಃ ಪರಾಧೀನನಾಗಿರುವ ಇವನು ಪತ್ನಿಯ ಇಷ್ಟಾರ್ಥವನ್ನು ಈಡೇರಿಸುವುದು ಹೇಗೆ ಸಾಧ್ಯ!. ಇಲ್ಲವೆಂದು ನಿರಾಕರಿಸುವುದೂ ಅಸಾಧ್ಯ. ಹೀಗೆ ಇಕ್ಕಟ್ಟಿಗೆ ಸಿಕ್ಕಿದ ಇವನು ಬಹಳ ಯೋಚಿಸಿ, ಕೊನೆಗೆ ಆ ದಿವಸ ತಾನೇ ರಚಿಸಿದ್ದ ಪದ್ಯವನ್ನು ಅವಳ ಕೈಗೆ ಕೊಟ್ಟು "ಇದನ್ನು ಯಾರ ಹತ್ತಿರವಾದರೂ ಒತ್ತೆ ಇಟ್ಟು ಅವರಿಗೆ ಬೇಕಾದ ಹಣವನ್ನು ಪಡೆದು ಉಪಯೋಗಿಸಿಕೋ" ಎಂದು ತಿಳಿಸಿ,

"ಸಹಸಾ ವಿದಧೀತ ನ ಕ್ರಿಯಾಮವಿವೇಕಃ
ಪರಮಾಪದಾಂ ಪದಂ।
ವೃಣುತೇ ಹಿ ವಿಮೃಶ್ಯಕಾರಿಣಂ ಗುಣಲುಬ್ಧಾಃ
ಸ್ವಯಮೇವ ಸಂಪದಃ॥"
ಕಿ. ರಾ. 2–30.

ಎಂಬ ಪದ್ಯರತ್ನವನ್ನು ಅವಳಿಗೆ ಕೊಟ್ಟನು. ಅವಳು ಆ ಪದ್ಯವನ್ನು ಸಮೀಪದ ನಗರದಲ್ಲಿದ್ದ ವರ್ಧಮಾನನೆಂಬ ಶ್ರೀಮಂತನ ಪತ್ನಿಗೆಕೊಟ್ಟು ಅವಳಿಂದ ಸ್ವಲ್ಪ ಹಣವನ್ನು ಪಡೆದುಕೊಂಡು ತೃಪ್ತಳಾದಳು. ಆ ಪದ್ಯದ ತಾತ್ಪರ್ಯ:—"ಯಾವ ಕೆಲಸವನ್ನೇ ಆದರೂ ಯೋಚಿಸದೆ ಮಾಡಬಾರದು. ಯುಕ್ತಾಯುಕ್ತ ವಿವೇಚನೆಯುಳ್ಳ ಮನುಷ್ಯನನ್ನು ಐಶ್ವರ್ಯವು ತಾನೇ ಆಶ್ರಯಿಸುತ್ತದೆ."

ಧನಿಕನ ಪತ್ನಿಯು ಆ ಶ್ಲೋಕವನ್ನು ತೆಗೆದುಕೊಂಡು ತನ್ನ ಶಯನಗೃಹದಲ್ಲಿ ಮಂಚದಮೇಲೆ ಸುರಕ್ಷಿತವಾಗಿರುವಂತೆ ಸಿಕ್ಕಿಸಿದ್ದಳು. ಏತನ್ಮಧ್ಯೆ ಶ್ರೀಮಂತನು ವ್ಯಾಪಾರಕ್ಕಾಗಿ ಪರದೇಶಕ್ಕೆ ಹೋಗಿದ್ದವನು ಅನೇಕ ವರ್ಷಗಳಕಾಲ ಊರಿಗೆ ಬಂದಿರಲಿಲ್ಲ. ಅವನು ಹೊರಡುವಾಗ ಪತ್ನಿಯು ಪೂರ್ಣಗರ್ಭಿಣಿಯಾಗಿದ್ದಳು. ಕೆಲವು ದಿವಸಗಳಲ್ಲಿ ಅವಳು ಸುಂದರ ಕುಮಾರನಿಗೆ ಜನ್ಮವಿತ್ತಳು. ಹುಡುಗನು ಪ್ರವರ್ಧಮಾನನಾಗಿ ಯೌವನಕ್ಕೆ ಕಾಲಿಟ್ಟಿದ್ದನು. ಒಂದು ದಿವಸ ರಾತ್ರಿ ಇದ್ದಕ್ಕಿದ್ದಂತೆ ವರ್ಧಮಾನನು ಮನೆಗೆ ಬಂದು ಬಾಗಿಲು ತಟ್ಟಲು ವರ್ತಕನ ಪತ್ನಿಯು ಬಾಗಿಲನ್ನು ತೆರೆದು ಆಶ್ಚರ್ಯಚಕಿತಳಾದಳು. ಇಷ್ಟರಲ್ಲಿ ಅವಳಪಕ್ಕದಲ್ಲಿ ಮಲಗಿದ್ದ ಪರಪುರುಷನನ್ನು ನೋಡಿ, ಅತಿ ಕ್ರುದ್ಧನಾದ ವರ್ತಕನು ಆ ಯುವಕನನ್ನು ತನ್ನ ಪತ್ನಿಯನ್ನು ಮುಗಿಸಿಬಿಡಬೇಕೆಂದು ತನ್ನ ಖಡ್ಗವನ್ನು ತೆಗೆದುಕೊಳ್ಳುವಾಗ ಅದಕ್ಕೆ ತಗುಲಿದ ಶ್ಲೋಕವು ಕೆಳಗೆ ಬಿತ್ತು. ಅದೇನಿರಬಹುದೆಂದು ಆಶ್ಚರ್ಯದಿಂದ ನೋಡಿದಾಗ ಆ ಶ್ಲೋಕವು ಗೋಚರಿಸಿತು. ಅದರ ಅರ್ಥವನ್ನು ಗ್ರಹಿಸಿದ ಶ್ರೀಮಂತನು ತನ್ನ ಕೋಪವನ್ನು ಅದಗಿಸಿಕೊಂಡು ಸಕ್ಕ ಕೆಲಸವನ್ನು ವಿಚಾರಿಸಿದನು. ಅನಂತರ ಆ ಯುವಕನು ತನ್ನ ಔರಸ ಪುತ್ರನೆಂದು ತಿಳಿದು ಬಹಳ ಸಂತೋಷಿಸಿದನು. ತನ್ನ ಪ್ರೀತಿಪಾತ್ರರ ಪ್ರಾಣವನ್ನು ಉಳಿಸಿದ ಆ ಶ್ಲೋಕವನ್ನು ತಂದವರು ಯಾರೆಂದು ವಿಚಾರಿಸಿ ಕಂಡುಹಿಡಿದು ಆ ಕವಿಗೆ ಕೃತಜ್ಞತೆಯನ್ನು ಸೂಚಿಸಿ ವಿಶೇಷ ಬಹುಮಾನವನ್ನು ಕೊಟ್ಟು, ಸತ್ಕರಿಸಿದನಂತೆ.

ಇಷ್ಟರಲ್ಲಿ 6 ತಿಂಗಳ ಅವಧಿ ಮುಗಿದು ತನ್ನ ಕಾವ್ಯವೂ ಪೂರ್ಣವಾಗಿತ್ತಂತೆ. ತಂದೆಯು ತಿಳಿಸಿದ ಪ್ರಾಯಶ್ಚಿತ್ತದ ಅಭಿಪ್ರಾಯವೂ ಪೂರ್ಣವಾಗಿ ವ್ಯಕ್ತವಾಗಿತ್ತಂತೆ. ಮಾವನ ಮನೆಯ ವಾಸದ ವಿಚಾರದಲ್ಲಿ ಕವಿಯು ಹೀಗೆ ಹೇಳಿದ್ದಾನೆ–

"ಶ್ವಶುರಗೃಹನಿವಾಸಃ
ಸ್ವರ್ಗತುಲ್ಯೋ ನರಾಣಾಂ
ಯದಿ ವಸತಿ ದಿನಾನಿ ತ್ರೀಣಿ
ಪಂಚಾಥ ಸಪ್ತ
ದಧಿಘೃತಮಧುಭಕ್ಷ್ಯೈ
ಕ್ಷೀರಸಾರ ಪ್ರವಾಹಃ
ತದುಪರಿ ದಿನಮೇಕಂ
ಪಾದರಕ್ಷಾಪ್ರಯೋಗಃ"

ಇದರ ಅರ್ಥವು ಸ್ವಯಂವೇದ್ಯ.

ಈ ಕಾವ್ಯದಲ್ಲಿ ರಾಜನೀತಿ, ರಾಜ್ಯಭಾರಕ್ರಮ, ಮೊದಲಾದ ವಿಚಾರಗಳು ಮನೋಹರ ರೀತಿಯಲ್ಲಿ ಚಿತ್ರಿತವಾಗಿವೆ. ಜಲಕ್ರೀಡೆ, ಚಂದ್ರೋದಯ, ಪ್ರಭಾತವರ್ಣನೆ, ಋತುವರ್ಣನೆ, ಅರ್ಜುನ–ಕಿರಾತಯುದ್ಧ ವರ್ಣನೆ ಮೊದಲಾದವು ಹೃದಯಂಗಮವಾಗಿ ನಿರೂಪಿಸಲ್ಪಟ್ಟಿವೆ.

ಕಥಾಭಾಗವನ್ನು ಮಹಾಭಾರತದ ಅರಣ್ಯ ಪರ್ವದಿಂದ ಆರಿಸಿಕೊಂಡಿದ್ದರೂ ಕವಿಯು ತನ್ನ ಪ್ರತಿಭಾವಿಶೇಷದಿಂದ ಕಾವ್ಯವನ್ನು ಅತಿಸುಂದರವಾಗಿ ರಚಿಸಿ ಕೀರ್ತಿಯನ್ನು ಗಳಿಸಿದ್ದಾನೆ. ಈ ಕಾವ್ಯದಲ್ಲಿ 18 ಸರ್ಗಗಳಿವೆ. ಕಾವ್ಯದ ಮೊದಲನೆಯ ಶ್ಲೋಕವನ್ನು "ಶ್ರಿಯಃಕುರೂಣಾಂ" ಎಂದು ಶ್ರೀಶಬ್ದದಿಂದಲೇ ಪ್ರಾರಂಭಿಸಿರುತ್ತಾನೆ. ಅಲ್ಲದೆ "ಮಂಗಳಾದೀನಿ, ಮಂಗಳಮಧ್ಯಾನಿ ಮಂಗಳಾಂತಾನಿ ಶಾಸ್ತ್ರಾಣಿ ಪ್ರಥಂತೇ" ಎಂಬ ನಿಯಮವನ್ನು ಅನುಸರಿಸಿ, ಪ್ರತಿಸರ್ಗದ ಕೊನೆಯ ಶ್ಲೋಕದಲ್ಲೂ "ಲಕ್ಷ್ಮೀ" ಅಂಕಿತವನ್ನು ಇಟ್ಟು ಕಾವ್ಯವನ್ನು ರಚಿಸಿರುತ್ತಾನೆ.

ಇದಲ್ಲದೆ ಬೇರೆ ಕಾವ್ಯವನ್ನು ಇವನು ರಚಿಸಿರುವಂತೆ ಕಂಡುಬರುವುದಿಲ್ಲ. ಇದರಲ್ಲಿ ಅನೇಕ ಸುಭಾಷಿತಗಳು ಪ್ರಸಿದ್ಧವಾಗಿವೆ. "ವರಂ

## ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ–517507
ಚಿತ್ತೂರು ಜಿಲ್ಲೆ, ಆಂ. ಪ್ರ.

"ವಿರೋಧೋಽಪಿ ಸಮಂ ಮಹಾತ್ಮಭಿಃ" ಇತ್ಯಾದಿ ಕನ್ನಡದಲ್ಲಿಯೂ ಇದೇ ಅರ್ಥ ಬರುವ ಲೋಕೋಕ್ತಿ (ಗಾದೆ) ಪ್ರಸಿದ್ಧವಾಗಿದೆ. "ಸಗಣಿಯವನ ಸ್ನೇಹಕ್ಕಿಂತ ಗಂಧದವನೊಡನೆ ಗುದ್ದಾಟ ಲೇಸು".

ಕಾವ್ಯದ ಹೆಸರಿನಿಂದಲೇ ಅದರ ಕಥಾಭಾಗವು ವ್ಯಕ್ತವಾಗುತ್ತದೆ. 'ಕಿರಾತ'ನೆಂದರೆ – ಕಿರಾತ ರೂಪಧಾರಿಯಾದ ಪರಮೇಶ್ವರ. "ಅರ್ಜುನ" ಸುಪ್ರಸಿದ್ಧನಾದ ಪಾಂಡವರಲ್ಲಿ ಮಧ್ಯಮನಾದ ಅರ್ಜುನನೇ. ಇವರಿಬ್ಬರಿಗೂ ನಡೆದ ಯುದ್ಧ ವರ್ಣನೆಯೇ ಈ ಕಾವ್ಯದ ಮುಖ್ಯಭಾಗವಾದ್ದರಿಂದ ಕಾವ್ಯಕ್ಕೆ "ಕಿರಾತಾರ್ಜುನೀಯ"ವೆಂಬ ಅಭಿದಾನವನ್ನು ಕವಿಯು ನೀಡಿದ್ದಾನೆ. 18ನೆಯ ಸರ್ಗದಲ್ಲಿ ಯುದ್ಧವರ್ಣನೆಯು ಅತಿಸುಂದರವಾಗಿ ವರ್ಣಿತವಾಗಿದೆ. ಮೊದಲು ಸಾಧಾರಣ ಶಬರನೆಂದು ಭಾವಿಸಿ ಅವನೊಡನೆ ಯುದ್ಧ ನಡೆಸುತ್ತಿದ್ದ ಅರ್ಜುನನಿಗೆ ಅವನ ಪರಾಕ್ರಮದ ಮಹಿಮೆಯು ತಿಳಿದು, ಅವನು ಸಾಮಾನ್ಯ ಶಬರನಲ್ಲವೆಂದು ಅನುಭವಕ್ಕೆ ಬಂದಮೇಲೆ, ಅವನಮೇಲೆ ಅನೇಕ ಅಸ್ತ್ರಗಳನ್ನು ಪ್ರಯೋಗಿಸಿ ಉಪಯೋಗವಿಲ್ಲದೇ ಇದ್ದುದರಿಂದ ಸರ್ಪಾಸ್ತ್ರ, ಗರುಡಾಸ್ತ್ರ, ಆಗ್ನೇಯಾಸ್ತ್ರ, ವಾರುಣಾಸ್ತ್ರ ಮೊದಲಾದ ಮಹಾಸ್ತ್ರಗಳನ್ನು ಪ್ರಯೋಗಿಸಿದನು. ಅದೂ ನಿಷ್ಫಲವಾದ ನಂತರ ಅತಿ ಕ್ರುದ್ಧನಾದ ಅರ್ಜುನನು ತನ್ನ ಗಾಂಡೀವ ಧನುಸ್ಸನ್ನೇ ಎತ್ತಿಕೊಂಡು ಪರಮೇಶ್ವರನ ತಲೆಯಮೇಲೆ ತೀವ್ರವಾಗಿ ಪ್ರಯೋಗಿಸಿದನು. ಕೊನೆಗೆ ಪಾರ್ಥನ ಅಮಿತ ಪರಾಕ್ರಮವನ್ನು ಸ್ವತಃ ಅನುಭವಿಸಿ, ಮೆಚ್ಚಿ, ಶಂಕರನು ಅವನಲ್ಲಿ ಅನುಗ್ರಹ ತೋರಿಸಿದನು. ಅಲ್ಲದೆ ಅವನಿಗೆ "ಪಾಶುಪತಾಸ್ತ್ರ"ವೆಂಬ ಅಮೋಘ ಅಸ್ತ್ರವನ್ನು ಬಹುಮಾನವಾಗಿ ಅನುಗ್ರಹಿಸಿದನು.

ತಪೋನಿರತನಾಗಿದ್ದ ಅರ್ಜುನನ ಸಮೀಪಕ್ಕೆ ಹಂದಿಯರೂಪವನ್ನು ಧರಿಸಿದ್ದ 'ಮೂಕ'ನೆಂಬ ದಾನವನು ಹಠಾತ್ತನೆ ನುಗ್ಗಿಬರುತ್ತಿರುವುದನ್ನು ಕಂಡು ಆತ್ಮರಕ್ಷಣೆಗಾಗಿ ಅವನನ್ನು ಹೊಡೆಯಲು ಉದ್ಯುಕ್ತನಾದನು. ಅಷ್ಟರಲ್ಲಿ ಶಬರವೇಷಧಾರಿಯಾದ ಪರಮೇಶ್ವರನು ತನ್ನ ಸಹಚರ (ಪ್ರಮಥಗಣ) ರಾದ ಇತರ ಕಿರಾತರೊಡನೆ ಅದೇ ಸೂಕರವನ್ನು ಅಟ್ಟಿಸಿಕೊಂಡು ಅರ್ಜುನನಿದ್ದ ಸ್ಥಳಕ್ಕೆ ಧಾವಿಸಿದನು. ಏಕಕಾಲದಲ್ಲಿ ಇಬ್ಬರೂ ಪ್ರಯೋಗಿಸಿದ ಬಾಣಕ್ಕೆ ತುತ್ತಾಗಿ ಸೂಕರವು ಅಸುವನ್ನು ನೀಗಿತು. ಅದು ಸಾಮಾನ್ಯ ಸೂಕರವಲ್ಲವೆಂದೂ, ಯಾವನೋ ದಾನವನು ತನಗೆ ಅಪಕಾರವೆಸಗಲು ಹೀಗೆ ಬಂದಿರಬಹುದೆಂದೂ ಪಾರ್ಥನಿಗೆ ಸಂದೇಹವಾಯಿತು. ಆದರೂ ಅದನ್ನು ಸಂಹರಿಸಿದೆ ಬಿಡುವುದು ಯುಕ್ತವಲ್ಲವೆಂದು ಯೋಚಿಸಿ ಕೊನೆಗೆ ಬಾಣಪ್ರಯೋಗಮಾಡಿದನು. ಅದು ಪ್ರಾಣತ್ಯಾಗಮಾಡಿದ ಕೂಡಲೇ ಅದರ ಸಮೀಪಕ್ಕೆ ಹೋಗಿ ತನ್ನ ಬಾಣವನ್ನು ಎಳೆದುಕೊಳ್ಳಲು ಪ್ರಯತ್ನಿಸಿದಾಗ ವನಚರನೊಬ್ಬನು ಎದುರಿಗೆ ಬಂದು "ನನ್ನ ಯಜಮಾನನು ಸಂಹರಿಸಿದ ಪ್ರಾಣಿಯನ್ನು ನೀನು ಏಕೆ ಅಪಹರಿಸುವೆ ? ನಿನ್ನ ವೇಷವನ್ನು ನೋಡಿದರೆ ತಪಸ್ವಿಯಂತೆ ಕಾಣಿಸುತ್ತೀಯೆ. ನಿನ್ನ ವೇಷಕ್ಕೆ ಈ ಕೃತ್ಯವು ಉಚಿತವಾದುದಲ್ಲ" ಎಂದು ಮೂದಲಿಸಿ ತನ್ನ ಪ್ರಭುವನ್ನು ಅವನಿಗೆ ತೋರಿಸಿದನು, ಮತ್ತು "ಅವನ ಸಖ್ಯವನ್ನು ಬೆಳೆಸಿದರೆ ನಿನ್ನ ಇಷ್ಟಾರ್ಥವು ಕೂಡಲೇ ಸಿದ್ಧಿಸುತ್ತದೆ" ಎಂದೂ ತಿಳಿಸಿದನು. ಅದಕ್ಕೆ ಉತ್ತರವಾಗಿ ಅರ್ಜುನನು ಅವನ ಸ್ನೇಹದಿಂದ ತನಗೆ ಆಗಬೇಕಾದದ್ದು ಏನೂ ಇಲ್ಲವೆಂದು ತಿರಸ್ಕರಿಸಿದನು. ಅನಂತರ ಅವರಿಬ್ಬರಲ್ಲಿ ಯುದ್ಧವು ಅನಿವಾರ್ಯವಾಗಿ ಸಂಭವಿಸಿತು. ಶಬರಸೈನ್ಯದಲ್ಲಿ ಅನೇಕರು ಅರ್ಜುನನಿಂದ ಹತರಾದರು. ಇವನ ಪರಾಕ್ರಮವನ್ನು ಪರೀಕ್ಷಿಸುವ ಉದ್ದೇಶದಿಂದಲೇ ಶಬರವೇಷಧಾರಿಯಾಗಿ ಬಂದಿದ್ದ ಪರಮೇಶ್ವರನು ಅರ್ಜುನನ ಪರಾಕ್ರಮವನ್ನು ಯುದ್ಧಕೌಶಲ್ಯವನ್ನು ಸ್ವತಃ ಅನುಭವಿಸಿ ಅತಿ ಪ್ರಸನ್ನನಾದನು ಮತ್ತು ಪ್ರಸಾದರೂಪವಾಗಿ ಪಾಶುಪತಾಸ್ತ್ರವನ್ನು ಅನುಗ್ರಹಿಸಿದನು. "ಕಿರಾತಾರ್ಜುನೀಯವು" ಈ ರೀತಿ ಮುಗಿಯುತ್ತದೆ.

ಈ ಮಹಾಕಾವ್ಯಕ್ಕೆ ಪ್ರಸಿದ್ಧ ವ್ಯಾಖ್ಯಾನಕಾರನಾದ ಮಲ್ಲಿನಾಥನ "ಘಂಟಾಪಥ"ವೆಂಬ ಅತಿ ಮನೋಜ್ಞವಾದ ವ್ಯಾಖ್ಯಾನವಿದೆ. ಇದಲ್ಲದೆ ಇನ್ನು ಅನೇಕ ವ್ಯಾಖ್ಯಾನಗಳಿದ್ದರೂ ಅವು ಪ್ರಸಿದ್ಧವಾಗಿಯೂ ಇಲ್ಲ. ಉಪಲಬ್ಧವಾಗಿಯೂ ಇಲ್ಲ. ಮಲ್ಲಿನಾಥನ ವ್ಯಾಖ್ಯಾನವು ಸರ್ವತ್ರ ವಿದ್ವಜ್ಜನರಿಂದ ಪುರಸ್ಕೃತವಾಗಿ ಸುಪ್ರಸಿದ್ಧವಾಗಿದೆ.

ಹೀಗೆ ಕಿರಾತಾರ್ಜುನೀಯ ಮಹಾಕಾವ್ಯವು ಅತ್ಯುತ್ತಮವಾದ ಮಹಾಕಾವ್ಯಗಳಲ್ಲಿ ಪ್ರಮುಖವಾಗಿದೆ. ★

## ಯುವವಾಣಿ

# ನೀತಿ ಶತಕಗಳು

ನಮ್ಮ ಕನ್ನಡನಾಡಿನಲ್ಲಿ ಶತಮಾನಗಳಿಂದಲೂ ನೀತಿಬೋಧಕ ಗ್ರಂಥಗಳಾದ ಕನ್ನಡ ಭಾರತ, ಹರಿಭಕ್ತಿಸಾರ, ಜೈಮಿನಿ ಭಾರತ, ತೊರವೆಯ ರಾಮಾಯಣ, ರಾಜಶೇಖರ ವಿಳಾಸ, ಸರ್ವಜ್ಞ ವಚನಗಳು – ಹಾಗೂ ಹರಿದಾಸರ ಹಾಡುಗಳು ಬಳಕೆಯಲ್ಲಿ ಅತ್ಯಂತ ಜನಪ್ರಿಯವಾಗಿರುವು. ಇವುಗಳ ಜೊತೆಗೆ ಅನೇಕ ನೀತಿ ಶತಕಗಳು ಕನ್ನಡಿಗರ ನಾಲಿಗೆಯಮೇಲೆ ನಲಿದಾಡುತ್ತಿವೆ.

ವಿಶಾಲವೂ ಪ್ರಾಚೀನವೂ ಆದ ಕನ್ನಡ ಸಾಹಿತ್ಯದಲ್ಲಿ ಶತಕಸಾಹಿತ್ಯವು ತನ್ನದೇ ಆದ ಕೆಲವು ವಿಶೇಷ ಗುಣಗಳಿಂದ ಕಂಗೊಳಿಸುತ್ತದೆ. ಜ್ಞಾನ, ಭಕ್ತಿ, ವೈರಾಗ್ಯ ಮತ್ತು ನೀತಿಯ ವಿಚಾರಗಳನ್ನು ಹಿತ-ಮಿತವಾಗಿ, ಲೋಕಾನುಭವದ ಹಲವು ನಿದರ್ಶನಗಳನ್ನು ಕೊಟ್ಟು ಪ್ರತಿಪಾದಿಸುವುದು ಈ ನೀತಿ ಶತಕಗಳ ಮುಖ್ಯೋದ್ದೇಶವಾಗಿದೆ.

ಭಕ್ತಿ ಜ್ಞಾನಗಳ ಬೋಧೆಗೆ ಹರಿಹರನ ಪಂಪಾಶತಕ ರಕ್ಷಾಶತಕ, ರತ್ನಾಕರನ ಅಪರಾಜಿತೇಶ್ವರ ಶತಕ, ಗುಮ್ಮಟಾಚಾರ್ಯನ ಗುಮ್ಮಟ ಶತಕ, ಮುಮ್ಮಡಿ ಕೃಷ್ಣರಾಜರ ಗಿರಿನಂಜುಂಡಶತಕ, ಮತ್ತು ಪಾರ್ವತೀ ವಲ್ಲಭ ಶತಕ, ಮುಂತಾದವುಗಳನ್ನು ನಿದರ್ಶನವಾಗಿ ಹೇಳಬಹುದು. ಲೋಕ ನೀತಿ, ಮತ್ತು ಅನುಭವ ನಿರೂಪಣೆಗೆ ಕನ್ನಡ ಭರ್ತೃಹರಿಶತಕ, ಚೆಲ್ವನಾರಾಯಣ ಶತಕ, ನಯಶತಕ, ಇವುಗಳನ್ನು ನಾವು ಹೆಸರಿಸಜಹುದು.

ಮತಧರ್ಮಗಳ ನಿರೂಪಣೆಗಾಗಿಯೂ ಶತಕಗಳನ್ನು ಬರೆದವರು ಕನ್ನಡದಲ್ಲಿ ಇದ್ದಾರೆ. ಐವುರೀಶ್ವರ ಶತಕ, ಶಿವಾಧವ ಶತಕಗಳು ಇದಕ್ಕೆ ಉದಾಹರಣೆಗಳಾಗಿವೆ.

ಶತಕಗಳು ಕಂದ, ವೃತ್ತ, ಷಟ್ಪದಿ, ಸಾಂಗತ್ಯ-ಛಂದಸ್ಸುಗಳಲ್ಲಿ ರಚಿತವಾಗಿವೆ. 'ಶತಕ' ಎಂದರೆ ನೂರು ಎಂದರ್ಥ. ಕೆಲವು ಶತಕಗಳಲ್ಲಿ 101, 108, 120, 125, ಈ ಬಗೆಯ ಪದ್ಯಗಳೂ ಉಂಟು. ಈ ಶತಕಕಾರರು ಪುರಂದರದಾಸರೇ ಮೊದಲಾದ ನೀತಿಬೋಧಕರಂತೆ ನಾಣ್ನುಡಿಗಳನ್ನು ವಿಪುಲವಾಗಿ ಬಳಸಿಕೊಂಡಿರುವದರಿಂದ ಅವು ಹೆಚ್ಚು ಜನಪ್ರಿಯವಾಗಿವೆ. ಅಲ್ಲದೇ ಶತಕಕಾರರ ಶೈಲಿಕೂಡ ಸುಲಭವಾಗಿ ದ್ರಾಕ್ಷಾಪಾಕದಿಂದ ಕೂಡಿರುವದು ಅವುಗಳ ಇನ್ನೊಂದು ಹಿರಿಯಗುಣ ಹಾಗೂ ಜನಪ್ರಿಯತೆಗೆ ಕಾರಣ ಎನ್ನಬಹುದು.

ಕನ್ನಡದಲ್ಲಿ ಕ್ರಿ.ಶ. 1070 ರಲ್ಲಿದ್ದ ನಾಗವರ್ಮಾಚಾರ್ಯನ "ಚಂದ್ರ ಚೂಡಾಮಣಿ ಶತಕ"ವೇ ಮೊದಲ ಶತಕವೆಂದು ತೋರುತ್ತದೆ. ಅಲ್ಲಿಂದ ಮುಂದೆ ಕ್ರಿ.ಶ. 1168ರಲ್ಲಿದ್ದ ಕೊಂಡಗೂಳಿ ಕೇಶಿರಾಜನ "ಷಡಕ್ಷರ ಕಂದ ಶತಕ". ಆನಂತರ ಕ್ರಿ. ಶ. 1200 ರಲ್ಲಿದ್ದ ಹರೀಶ್ವರನ ಪಂಪಾಶತಕ ರಕ್ಷಾಶತಕಗಳು ಸಾಹಿತ್ಯದಲ್ಲಿ ಪ್ರಖ್ಯಾತವೆನಿಸಿವೆ.

ಮುಂದೆ ಚಂದ್ರಕವಿಯ ಗುರುಮೂರ್ತಿ ಶಂಕರಶತಕ, ಗುಮ್ಮಟಾಚಾರ್ಯನ ಅರ್ಧೇಂದುಮೌಳಿಶತಕ, ವೀರಭದ್ರರಾಜನ ಪಾರ್ವತೀವಲ್ಲಭ ಶತಕ, ಮೊದಲಾದವು ಗಮನಾರ್ಹವಾದವು. ಮಹಾಕವಿ ಚಿಕುಪಾಧ್ಯಾಯನ ಶತಕ, ಸಾಂಗತ್ಯಗಳೂ ಈ ಸಂದರ್ಭದಲ್ಲಿ ನೆನೆಯಲು ಅರ್ಹವಾಗಿವೆ. ಕೊನೆಯದಾಗಿ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ದೇವಲಾಪುರದ ನಂಜುಂಡ ಕವಿಯು ಹಲವಾರು ಶಕತಗಳನ್ನು ರಚಿಸಿ ಕನ್ನಡದ ಸಂಪತ್ತನ್ನು ಹೆಚ್ಚಿಸಿದ್ದಾನೆ. ಚಾಮರಾಜ ಒಡೆಯರ ಕಾಲದಲ್ಲಿ ಮಹಾಕವಿ ಬಸವಪ್ಪ ಶಾಸ್ತ್ರಿಗಳು ಸುಪ್ರಸಿದ್ಧ ಭರ್ತೃಹರಿಯ 'ಶತಕತ್ರಯ' ವನ್ನು ಕನ್ನಡಕ್ಕೆ ಭಾಷಾಂತರಿಸಿ ಕೊಟ್ಟಿರುವುದಲ್ಲದೇ ಶಂಕರಶತಕ, ನೀತಿಸಾರಶತಕ, ಆರ್ಯಾಶತಕ-ಮುಂತಾದವುಗಳನ್ನು ರಚಿಸಿ ಉಪಕಾರ ಮಾಡಿರುವರು.

ಇದೇ ಸುಮಾರಿನಲ್ಲಿ ಶ್ರೀನಿವಾಸ ಕವಿಯ ವರ್ಷವರ್ಧಂತಿ ಶತಕವೂ ಕರ್ನಾಟಕ ಭಾಷಾರತ್ನ ಕರಿಬಸವಶಾಸ್ತ್ರಿಗಳ ನಯಶತಕವೂ. ಕವಿ ಅಳಸಿಂಗಾಚಾರ್ಯರ ಚೆಲ್ವನಾರಾಯಣ ಶತಕವೂ ಸುದೈವದಿಂದ ರಚಿತವಾಗಿ ಸಾಹಿತ್ಯ ಸಂಪತ್ತಿಗೆ ಕಾರಣವಾದವು.

ಕನ್ನಡದ ಶತಕಕಾರರಿಗೆ ಸಂಸ್ಕೃತದ ಮಯೂರಶತಕ, ಅಮರು ಶತಕ, ಭರ್ತೃಹರಿಶತಕ, ಸುದರ್ಶನಶತಕ, ದಯಾಶತಕ, ಜ್ಞಾನ ಶತಕ, ನ್ಯಾಯಶತಕ ಮುಂತಾದ ಹಲವು ಶತಕಗಳು ಸ್ಫೂರ್ತಿಯನ್ನು ಕೊಟ್ಟಿರುವವೆಂದು ಹೇಳಬಹುದು. ಸೋದರ ಭಾಷೆಯಾದ ತೆಲುಗಿನಲ್ಲಿಕೂಡ ಸುಮತಿ ಶತಕ, ವೃಷಾಧಿಪ ಶತಕ, ಪಾಲ್ಕುರಿಕೆ ಸೋಮನಾಥ ಶತಕ. ಸರ್ವಸಾಮಾನ್ಯ ಶತಕ ಮೊದಲಾದವು ಶ್ರೇಷ್ಠವಾಗಿವೆ. ಒಟ್ಟಿನಲ್ಲಿ ಭಾರತೀಯ ಸಾಹಿತ್ಯದಲ್ಲಿಯೂ ಕನ್ನಡ ವಾಙ್ಮಯದಲ್ಲಿಯೂ, ಶತಕ ವಾಙ್ಮಯವು ತನ್ನದೇ ಆದ ಹಲವು ವೈಲಕ್ಷಣ್ಯಗಳಿಂದ ಕೂಡಿ ಮನೋಹರ ವೆನಿಸಿದೆ.

ಇನ್ನು ಕನ್ನಡ ಶತಕಗಳಲ್ಲೊಂದಾದ "ಸೋಮೇಶ್ವರ ಶತಕ"ವು ಲೋಕ ನೀತಿಯನ್ನು ಹೇಳುವ ಶತಕಗಳಲ್ಲಿ ಅಗ್ರಸ್ಥಾನವನ್ನು ಪಡೆದಿರುತ್ತದೆ. ಈ ಶತಕದಲ್ಲಿ ಕಂಡುಬರುವ ನೀತಿ ಬೋಧೆಯ ಬಗ್ಗೆ-ಸ್ವಲ್ಪ ವಿವೇಚಿಸಲಾಗಿದೆ.

'ಸೋಮೇಶ್ವರ ಶತಕ'ದ ಕರ್ತೃವು ಸೋಮಕವಿಯಾಗಿದ್ದಾನೆ. ಇವನು ಕರ್ನಾಟಕ ರಾಜ್ಯದ ಧಾರವಾಡ ಜಿಲ್ಲೆಯ ಲಕ್ಷ್ಮೇಶ್ವರ ಎಂಬ ಊರಲ್ಲಿ ವಾಸ ಮಾಡಿದ್ದನು. ಇವನು ಕ್ರಿ. ಶ. 1300 ರಲ್ಲಿ ಇದ್ದನೆಂದು ತಿಳಿದುಬರುತ್ತದೆ. ಇವನ ಶತಕದಲ್ಲಿ ಮೊದಲಿನಿಂದ ಕೊನೆಯವರೆಗೆ ನೀತಿಬೋಧೆಯನ್ನು ಯಥೇಚ್ಛವಾಗಿ ಕಾಣಬಹುದಾಗಿದೆ. ಈ ಶತಕದಲ್ಲಿ 107 ಮತ್ತೇಭ ವಿಕ್ರೀಡಿತ ವೃತ್ತಗಳಿರುತ್ತವೆ.

ಕುಲವೆಣ್ಣಿಂಗೆಣೆಯಾವುದೈ? ಸುತನೇ ಸದ್ಗತಿದಾತನೈ, ದ್ವಿಜನಾಚಾರತೆಯು

**ಶ್ರೀ ಶ್ರೀನಿವಾಸ ಮಠದ,** ಬಿ.ಎಸ್‌ಸಿ;

ಳ್ವನಂ, ಆಸತ್ತಿನೊಳ್ ಮಚ್ಚದುಂ ನೋಡದ ಬಂಧುವೇತಕೆ? ನುಡಿದುಂ ತಪ್ಪುವ ರಾಜನಂ ಸುಡು, ಅವಿನೀತಂ ಮಗನೇ? ದುಸ್ಸಂಗದೊಳಿರ ಹಾನಿಯ್ಯೆ. ವಿದಿಯಂ ಮೀರುವನಾವನ್ನೆ? ಪಡೆದಷ್ಟಲ್ಲದೇ ಒಪ್ಪುದೇ? ಸಿರಿಬಂದುನಿಲೆ ಪುಣ್ಯವ್ವೆ, ಪೂರ್ವದೊಳ್ ಪಡೆದಷ್ಟುಣ್ಣದೇ ಪೋಪರೆ? ಅತಿ ಕಾಮುರ್ಗತಿ ಹಾನಿಯ್ಯೆ, ದುರುಳುಂ ಬಲ್ಲನೆ ಬಾಳ್ವನಂ, ಪಗೆಯು ಬಾಲಕನೆಂಬರೆ? ಬಡವಂ ಬಲ್ಲಿದನಾಗನೆ? ಕೊಡುವರ್ ಕೊಂಬರು ಮರ್ತ್ಯರೇ, ಬಿಡ ತನ್ನಂದವ ನೀಚ ತಾಂ, ಕಡುಮೂರ್ಖಂ ಹಿತಂ ಕೇಳ್ವನೇ, ಧನಿಕಂ ಸತ್ಕುಲಜಾತನ್ನೆ, ಪರಸೇವಾಸ್ಥಿತಿಕಷ್ಟವ್ವೆ, ಕದನಕ್ಕಂಜುವ ವೀರನೆ? ಕೊಡಬೇಕುತ್ತಮನಾದವಗೆ ಮಗಳಂ, ಋಣಭಾರಕ್ಕೆಹೆಯೂ ವುದ್ವೆ? ತೆರಬೇಡೊತ್ತ್ತನೆಬಡ್ಡಿಯಂ, ಜನರಂ ಮೆಚ್ಚಿಸಲಾಗದ್ವೆ, ಕವಿಯೇ ರಾಜರ ಕಣ್ಣೆಲ್ವೆ ಬಹು ವಿದ್ವಾಂಸನು ಭ್ರಾಂತನ್ವೆ, ನುಡಿಯೇ ನಿರ್ಮಲ ಚಿತ್ತವ್ವೆ. – ಈ ಮೊದಲಾದ ನೀತಿ ವಾಕ್ಯಗಳು ನೀತಿ, ಧರ್ಮ ಪ್ರತಿಪಾದನೆಗೆ ಸೊಗಸಾದ ನಿದರ್ಶನವೆನಿಸಿವೆ.

'ಸೋಮೇಶ್ವರ ಶತಕ'ದಲ್ಲಿ ಒಂದು ಪದ್ಯ ಹೀಗಿದೆ.

ಕೆಲವಂ ಬಲ್ಲವರಿಂದ ಕಲ್ತು
ಕೆಲವಂ ಶಾಸ್ತ್ರಂಗಳಂ ಕೇಳುತಂ
ಕೆಲವಂ ಮಾಳ್ಪವರಿಂದ ಕಂಡು
ಕೆಲವಂ ಸುಜ್ಞಾನದಿಂ ನೋಡುತಂ
ಕೆಲವಂ ಸಜ್ಜನಸಂಗದಿಂದಲರಿಯಲ್
ಸರ್ವಜ್ಞನಪ್ಪಂ ನರಂ
ಪಲವುಂ ಪಳ್ಳ ಸಮುದ್ರವ್ವೆ ಹರಹರಾ
ಶ್ರೀ ಚೆನ್ನ ಸೋಮೇಶ್ವರಾ ||

ಈ ಪದ್ಯದಲ್ಲಿ, ಅನೇಕ ತೊರೆಗಳು ಬಂದು ಸೇರಿ ಒಂದು ದೊಡ್ಡ ಸಮುದ್ರವಾಗುವಂತೆ, ಮನುಷ್ಯನು ಕೆಲವು ವಿಷಯಗಳನ್ನು ಪಂಡಿತರಿಂದಲೂ, ಕೆಲವನ್ನು ಶಾಸ್ತ್ರಗಳಿಂದಲೂ, ಕೆಲವನ್ನು ಇತರರ ಆಚರಣೆಯಿಂದಲೂ, ಕೆಲವನ್ನು ಸ್ವಬುದ್ಧಿಯಿಂದಲೂ, ಕೆಲವನ್ನು ಸಜ್ಜನರ ಸಹವಾಸದಿಂದಲೂ ತಿಳಿದುಕೊಳ್ಳುವುದರಿಂದ ಸರ್ವಜ್ಞನಾಗುತ್ತಾನೆ ಎಂಬುದನ್ನು ಅಂದವಾಗಿ ಬಣ್ಣಿಸಿ ತಿಳಿಸಲಾಗಿದೆ–

ರವಿಯಾಕಾಶಕೆ ಭೂಷಣಂ,
ರಜನಿಗಾಚಂದ್ರಮಂ ಮಹಾಭೂಷಣಂ,
ಕುವರಂ ವಂಶಕೆ ಭೂಷಣಂ,
ಸರಸಿಗಂಭೋಜಾತಗಳ್ ಭೂಷಣಂ,
ಹವಿಯಜ್ಞಾಳಿಗೆ ಭೂಷಣಂ
ಸತಿಗೆ ಪಾತಿವ್ರತ್ಯವೇ ಭೂಷಣಂ,
ಕವಿಯಾಸ್ಥಾನಕೆ ಭೂಷಣಂ, ಹರಹರಾ
ಶ್ರೀ ಚೆನ್ನಸೋಮೇಶ್ವರಾ ||

ಅಂದರೆ ಆಕಾಶಕ್ಕೆ ಸೂರ್ಯನು, ರಾತ್ರಿಗೆ ಚಂದ್ರನು, ವಂಶಕ್ಕೆ ಮಗನೂ, ಸರೋವರಕ್ಕೆ ಕಮಲವೂ, ಯಜ್ಞಕ್ಕೆ ಹೋಮ ಮಾಡುವ ಪದಾರ್ಥವೂ, ಸ್ತ್ರೀಗೆ ಪಾತಿವ್ರತ್ಯವೂ, ರಾಜಸಭೆಗೆ ಕವಿಯೂ ಅಲಂಕಾರವು.

ಇಲ್ಲಿ ಶ್ರೀ ಶ್ರೀಪಾದರಾಯರ "ಭೂಷಣಕೆ ಭೂಷಣ ಇದು ಭೂಷಣ" ಎಂಬ ಪದ್ಯದಲ್ಲಿ ಬರುವ "ಮಾನಿನಿಗೆ ಭೂಷಣ ಪತಿಭಕ್ತಿಯೂ" ಎಂಬ ವಿಷಯವನ್ನೇ ಕವಿಯು 'ಸತಿಗೆ ಪಾತಿವ್ರತ್ಯವೇ ಭೂಷಣ' ಎಂಬ ನುಡಿಯಿಂದ ತಿಳಿಸಿಕೊಟ್ಟಿದ್ದಾನೆ.

ಗಿಡವೃಕ್ಷಂಗಳಿಗಾರು ನೀರನೆರೆವರ್
ನಿತ್ಯಂ ಮಹಾರಣ್ಯದೊಳ್
ಕಡುಕಾರ್ಪಣ್ಯದಿ ಕೇಳ್ವವೇ ಶಿಖಿ
ಜಲೋರ್ವೀ ಮಾರುತಾಕಾಶಮುಂ
ಮೃಡ ನೀನಲ್ಲದದಾರು ಕಾಯ್ವರು
ಜಗದ್ರಕ್ಷಾಕರಂ ನೀನೆಲ್ವೆ |
ಕೊಡುವರ್‌ಕೊಂಬರು ಮರ್ತ್ಯರೇ
ಹರಹರಾ ಶ್ರೀಚನ್ನ ಸೋಮೇಶ್ವರಾ ||

ಇಲ್ಲಿ, ಕಾಡಿನೊಳಗೆ ಬೆಳೆದ ಮರಗಳಿಗೆ ನಿತ್ಯವೂ ನೀರನ್ನು ಯಾರು ಹಾಕುವರು? ಅವು ಪಂಚಮಹಾಭೂತಗಳ ಬಳಿಗೆ ಹೋಗಿ ದೈನ್ಯದಿಂದ ಬೇಡಿಕೊಳ್ಳುತ್ತವೆಯೇ? ಎಲೈ ಈಶ್ವರನೇ ಲೋಕವನ್ನೆಲ್ಲ ರಕ್ಷಿಸುವವನು ನೀನಲ್ಲದೇ ಮತ್ತಾರು? ಕೊಡುವದಕ್ಕೂ, ತೆಗೆದುಕೊಳ್ಳುವದಕ್ಕೂ ಮನುಷ್ಯನಿಗೆ ಸ್ವಾತಂತ್ರ್ಯವೆಲ್ಲಿಯದು? ಎಂಬ ಭಾವವನ್ನು ಅತಿ ಸುಂದರವಾಗಿ ವರ್ಣಿಸಲಾಗಿದೆ.

ಶ್ರೀ ಕನಕದಾಸರ "ತಲ್ಲಣಿಸದಿರು ಕಂಡ್ಯ ತಾಳು ಮನವೆ, ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ" ಎಂಬ ಪದ್ಯದಲ್ಲಿರುವ "ಬೆಟ್ಟದಾ ತುದಿಯಲ್ಲಿ ಹುಟ್ಟಿದ ವೃಕ್ಷಕ್ಕೆ ಕಟ್ಟೆಯನು ಕಟ್ಟಿ ನೀರೆರೆದವರು ಯಾರೋ? ಎಂಬ ವಿಷಯದ ಭಾವವನ್ನೇ "ಗಿಡವೃಕ್ಷಂಗಳಿಗಾರು ನೀರನೆರೆವರ್ ನಿತ್ಯಂ ಮಹಾರಣ್ಯದೊಳ್" ಎಂಬ ನುಡಿಯಿಂದ ತಿಳಿಸಿಕೊಟ್ಟು ಆ ಈಶ್ವರನೇ ಸ್ವತಂತ್ರನು ಎಂಬುದನ್ನು ವಿಶದೀಕರಿಸಿದ್ದಾನೆ.

ಪೊಡೆಯೊಳ್‌ತುಂಬಿರೆಪಂಕ ಮೇಲೆ
ತೊಳೆಯಲ್ ತಾಂಶುದ್ಧನೇನಪ್ಪನೇ
ಕಡುಪಾಪಂ ಬಲುಮೀಯಲಾತತುಚಿಯೇ
ಕಾಕಾಳಿಯೇಂ ಮೀಯದೇ |
ಗುಡ ಪಾನಂಗಳೊಳದ್ದೆ ಬೇವಿನ ಫಲಂ
ಸ್ವಾದಪ್ಪುದೇ ಲೋಕದೊಳ್
ಮಡಿಯೇ ನಿರ್ಮಲಚಿತ್ತವ್ವೆ ಹರಹರಾ
ಶ್ರೀ ಚೆನ್ನ ಸೋಮೇಶ್ವರಾ ||

ಹೊಟ್ಟೆಯಲ್ಲಿ ಕಲ್ಮಷವನ್ನು ತುಂಬಿಕೊಂಡು ಮೇಲೆ ತೊಳೆದರೆ ಪರಿಶುದ್ಧನಾಗುವನೆ? ಬಹಳ ಪಾಪಮಾಡಿದವನು ಅನೇಕತೀರ್ಥ ಸ್ನಾನಗಳನ್ನು ಮಾಡಿದರೆ ಶುದ್ಧನಾಗುವನೇ? ಕಾಗೆಗಳ ಗುಂಪು ಸ್ನಾನಮಾಡುವುದಿಲ್ಲವೇ? ಬೇವಿನ ಹಣ್ಣನ್ನು ಬೆಲ್ಲದ ಪಾನಕದಲ್ಲಿ ಮುಳುಗಿಸಿಟ್ಟರೆ ಅದರ ಕಹಿಯು ಹೋಗಿ ಸಿಹಿಯಾಗುವದೇ? ಆದ್ದರಿಂದ ಮನಸ್ಸು ಶುದ್ಧವಾಗಿದ್ದಿರುವದೇ ಮಡಿಯು.

ಇಂಥ ಅನೇಕ ಲೋಕ ತತ್ವ ನೀತಿಗಳನ್ನೊಳಗೊಂಡ "ನೀತಿ ಶತಕ"ಗಳು ಕನ್ನಡ ಸಾಹಿತ್ಯದ ಸಂಪತ್ತಿಯನ್ನು ಹೆಚ್ಚಿಸಿರುವದು ಬಹು ಸಂತಸದ ಸಂಗತಿಯಾಗಿದೆ.



# ಶ್ರೀ ಬಸವೇಶ್ವರರು

ಭಕ್ತಿಭಂಡಾರಿ ಬಸವಣ್ಣನವರು ಎಂಟು 'ನೂರು ವರ್ಷಗಳ ಹಿಂದೆ ಬಾಗೇವಾಡಿಯಲ್ಲಿ ಹುಟ್ಟಿದ ಕ್ರಾಂತಿಪುರುಷರು. ಆಚಾರವೇ ಸ್ವರ್ಗ, ಅನಾಚಾರವೇ ನರಕ'' ಎಂದು ಸಾರಿ, 'ಹೊನ್ನಶೂಲ' ಎಂದು ಹೊಗಳಿಕೆಯನ್ನು ದೂರ ವಿಟ್ಟು, ಕೂಡಲ ಸಂಗಮದೇವನಿಗೆ ಸರ್ವಾರ್ಪಣೆ ಮಾಡಿಕೊಂಡರು. ಶುಭ್ರಜೀವನ ಸಮತಾ ಭಾವ, ಕಾಯಕಗಳ ಆದರ್ಶಗಳನ್ನು ಸಾರಿದರು, ಅವನ್ನೇ ಆಚರಿಸಿ ಬಾಳಿದರು, ಶತಮಾನಗಳನ್ನು ಗೆದ್ದು ಬೆಳಗುವ ಜ್ಯೋತಿಯಾದರು.

'ಕಾಯಕವೇ ಕೈಲಾಸ' ಎಂದು ಸಾರಿ ಧರ್ಮ ನೀತಿ, ಸಮಾಜ ವ್ಯವಸ್ಥೆ, ಭಾಷೆ, ಸಾಹಿತ್ಯ, ಆರ್ಥಿಕ ಪರಿಸ್ಥಿತಿಗಳಲ್ಲಿ ದೊಡ್ಡ ಸುಧಾರಣೆ ಯುಂಟುಮಾಡಿ ನಮ್ಮ ನಾಡಿಗೆ ಮಾತ್ರವಲ್ಲದೆ, ಇಡೀಜಗತ್ತಿಗೆ ಬೆಳಕು ಬೀರಿದ ಜ್ಯೋತಿ ಬಸವಣ್ಣನವರು. ಆದ್ದರಿಂದಲೇ ಹರಿಹರ ಮಹಾಕವಿ ಇವರನ್ನು 'ಬಸವರಾಜದೇವ' ಎಂದು ಕರೆದು ಇವರ ಬಗ್ಗೆ 'ಬಸವರಾಜ ದೇವರ ರಗಳೆ ಎಂಬ ಒಂದು ಕೃತಿಯನ್ನೇ ರಚಿಸಿದ.

ಇವರ ಕಾಲ 12 ನೆಯ ಶತಮಾನ. ತಂದೆ ಮಾದರಸ, ತಾಯಿ ಮಾದಲಾಂಬಿಕೆ. ಬಸವೇಶ್ವರರು ನಂದಿಯ ಅವತಾರ ಎಂದು ವೀರಶೈವರು ನಂಬುತ್ತಾರೆ. ಇವರ ಗುರು ಶೈವಸನ್ಯಾಸಿ ಜಾತವೇದ ಮುನಿಗಳು. ಇವರು ತಮ್ಮ ಎಂಟು ವರ್ಷದ ವಯಸ್ಸಿನಲ್ಲಿ ಉಪನಯನದ ಏರ್ಪಾಡನ್ನು ನಿರಾಕರಿಸಿ ಕಪ್ಪಡಿಗೆ ಹೋಗಿ ಗುರುವಿನ ಸನ್ನಿಧಿಯಲ್ಲಿ ಹದಿನೆಂಟು ವರ್ಷಗಳ ಕಾಲ ಜ್ಞಾನಾರ್ಜನೆ ಮಾಡಿದರು. ನಂತರ ಗುರುಗಳ ಅಪ್ಪಣೆಯಂತೆ ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಕಲಚೂರಿರಾಜ ಬಿಜ್ಜಳನ ಆಸ್ಥಾನದಲ್ಲಿ ಕರಣಿಕರಾಗಿ ಹಾಗೂ ಮಂತ್ರಿಯಾಗಿ ಕಾಯಕವನ್ನು ಕೈಗೊಂಡು ಪ್ರವೃದ್ಧಮಾನಕ್ಕೆ ಬಂದದ್ದು ಇತರರು ಸಹಿಸದೆ ಬಿಜ್ಜಳನಿಗೆ ಚಾಡಿ ಹೇಳಿ ಇಬ್ಬರಲ್ಲೂ ವೈಮನಸ್ಯವನ್ನು ಬೆಳೆಸಿದರು. ಬಸವಣ್ಣನವರ ವೀರಶೈವಧರ್ಮಪ್ರಚಾರ ಹಾಗೂ ಅಂತರ್ಜಾತಿಯ ವಿವಾಹವನ್ನು ಬಿಜ್ಜಳನು ಒಪ್ಪದಿದ್ದ ಕಾರಣದಿಂದ ಬಸವಣ್ಣನವರು ಅವನನ್ನು ಕೊಲ್ಲಿಸಿದರೆಂದೂ, ತಾವು ಅರಮನೆಯನ್ನು ಬಿಟ್ಟು ಕೂಡಲ ಸಂಗಮದಲ್ಲಿ ಐಕ್ಯರಾದರೆಂದು ಪ್ರತೀತಿ; ಆದರೆ ಅನೇಕ ವಿದ್ವಾಂಸರು ಬಸವೇಶ್ವರರು ಬಿಜ್ಜಳನನ್ನು ಕೊಲೆಗೈದರೆಂಬುದನ್ನು ಒಪ್ಪುವುದಿಲ್ಲ. ಅದೇನೆ ಇರಲಿ, ಬಸವೇಶ್ವರರು ತಮ್ಮ ಮೂವತ್ತಾರನೆ ವಯಸ್ಸಿನಲ್ಲಿ ಸಂಗಮೇಶ್ವರ ದೇವರಲ್ಲಿ ಒಂದಾದರು.

ಬಸವೇಶ್ವರರು ಪ್ರಚಲಿತಗೊಳಿಸಿದ ವೀರಶೈವ ಧರ್ಮವನ್ನು ವೇದ, ಆಗಮ, ಉಪನಿಷತ್ತುಗಳಲ್ಲಿ ಹೇಳಲಾಗಿದೆ ಬಸವೇಶ್ವರರು ಅದಕ್ಕೆ ಒಂದು ಹೊಸ ರೂಪವನ್ನು ಕೊಟ್ಟು ಅದನ್ನು ಜನಪ್ರಿಯಗೊಳಿಸಿದರು. ಅವರು ಪ್ರತಿಪಾದಿಸಿದ ತತ್ತ್ವವನ್ನು ಶಕ್ತಿವಿಶಿಷ್ಟಾದ್ವೈತವೆಂದೂ, ಶಿವಾದ್ವೈತವೆಂದೂ, ಕರೆಯುವುದುಂಟು. ಬಸವೇಶ್ವರರು ಏಕದೇವವಾದಿಗಳು. ಶಿವನೇ ಪರಮಸತ್ಯ, ವಿಶ್ವದ್ದೆಲ್ಲಾ ಆತನ ಅಧೀನವೆಂದೂ ಅವರ ನಂಬಿಕೆ ಶಿವಭಕ್ತರು ಲೋಕದ ಚೇತನಕ್ಕೆ ಕಾರಣರು. ಆತ್ಮವು ಪರಮಾತ್ಮನ ಅಧೀನ.

ವೀರಶೈವ ತತ್ತ್ವದ ಪ್ರಕಾರ ಭಗವಂತನ ಸಾಕ್ಷಾತ್ಕಾರವಾಗಲು ಭಕ್ತನು ಆರು ಘಟ್ಟಗಳನ್ನು ದಾಟಬೇಕಾಗುತ್ತದೆ. ಇದನ್ನು ಷಟ್ಸ್ಥಲ ಎಂದು ಕರೆಯಲಾಗಿದೆ.

ಭಕ್ತಸ್ಥಲದಲ್ಲಿ ಭಕ್ತನು ತನ್ನ ದೇಹ, ಮನಸ್ಸು ಹಾಗೂ ತನ್ನ ಲೌಕಿಕ ಸೊತ್ತುಗಳನ್ನು ಗುರುವಿಗೆ ಸಮರ್ಪಿಸುತ್ತಾನೆ.

ಮಾಹೇಶ್ವರಸ್ಥಲದಲ್ಲಿ ಭಕ್ತನು ತನ್ನ ಯಾವ ಪ್ರತಿಫಲದ ಅಪೇಕ್ಷೆಯೂ ಇಲ್ಲದೆ ಸಕಲ ಕಾರ್ಯಗಳನ್ನು ನೆರವೇರಿಸಲು ಶಕ್ತನಾಗುತ್ತಾನೆ.

ಪ್ರಸಾದಿಸ್ಥಲದಲ್ಲಿ ಭಕ್ತನು ಸಕಲವನ್ನು ಶಿವನಿಗೆ ಸಮರ್ಪಿಸಿ, ಅದನ್ನು ಶಿವಪ್ರಸಾದವೆಂದು ತಿಳಿದು ಅನುಭವಿಸುತ್ತಾನೆ.

ಪ್ರಾಣಲಿಂಗಸ್ಥಲದಲ್ಲಿ ಭಕ್ತನು ತನ್ನ ಪ್ರಾಣವನ್ನು ಶಿವನ ಶಕ್ತಿ ಎಂದು ಪರಿಗಣಿಸುತ್ತಾನೆ.

ಶರಣಸ್ಥಲದಲ್ಲಿ ಭಕ್ತನು ತಾನು ಶಿವನ ಒಂದು ಕೈಗೊಂಬೆ ಎಂದು ತಿಳಿಯುತ್ತಾನೆ.

ಐಕ್ಯಸ್ಥಲದಲ್ಲಿ ಭಕ್ತನು ತನ್ನತನವನ್ನು ತೊರೆದು ಶಿವನಲ್ಲಿ ಲೀನವಾಗುತ್ತಾನೆ. ಇದು ಮೋಕ್ಷ. ಇದನ್ನೇ ವೀರಶೈವರು 'ಲಿಂಗೈಕ್ಯಸಾಮರಸ್ಯ' ವೆಂದೆನ್ನುತ್ತಾರೆ.

ಭಕ್ತನು ಲೋಕದ ಕಶ್ಮಲಗಳಿಂದ ದೂರವಿರಲು ಅಷ್ಟಾವರಣಗಳು ಇವೆಯೆಂದೂ ವೀರಶೈವರು ನಂಬುತ್ತಾರೆ ಗುರು, ಲಿಂಗ ಜಂಗಮ, ಪಾದೋದಕ, ಪ್ರಸಾದ, ಭಸ್ಮ, ರುದ್ರಾಕ್ಷಿ ಮತ್ತು ಮಂತ್ರಗಳು ಅಷ್ಟಾವರಣಗಳು. ಶಿವಸನ್ನಿಧಿಯತ್ತ ನಡೆಯಲು ಇವು ಸಹಾಯವಾಗುತ್ತವೆ ಎಂದು ವೀರಶೈವರ ನಂಬಿಕೆ.

ಬಸವೇಶ್ವರರು ಕಲ್ಯಾಣದಲ್ಲಿ 'ಅನುಭವ ಮಂಟಪ'ವನ್ನು ಸ್ಥಾಪಿಸಿ, ಶರಣರ ವಿಚಾರವಿನಿಮಯಗಳಿಗೆ ಒಂದು ಕ್ಷೇತ್ರವನ್ನು ಕಲ್ಪಿಸಿಕೊಟ್ಟರು. ಇದು ವೀರಶೈವರ ಮತ ಪ್ರಚಾರ ಕೇಂದ್ರವಾದದ್ದು ಮಾತ್ರವಲ್ಲದೆ, ಬಸವೇಶ್ವರರ ತತ್ತ್ವಸುಧೆಯನ್ನು ಸಿಂಪಡಿಸುವ ಒಂದು ಕಾರಂಜಿಯಾಯಿತು. ಇವರು ಮತ ಪ್ರಚಾರಕರಾಗಿ, ಧರ್ಮಬೋಧಕರಾಗಿ ಮತ್ತು ತತ್ತ್ವಬೋಧಕರಾಗಿ ತಮ್ಮ ವಚನಗಳಿಂದ ನೀತಿ ಧರ್ಮಗಳನ್ನು ಉದ್ಧಾರಮಾಡಿದರು. ಬಸವಣ್ಣನವರ ವಚನಗಳು ಕನ್ನಡ ಸಾಹಿತ್ಯದ ರತ್ನಗಳಂತಿವೆ.

ದೇವನೊಬ್ಬ, ನಾಮ ಹಲವು ಒಬ್ಬ ಪರಮಾತ್ಮನಲ್ಲಿ ಭಕ್ತಿಯಿಟ್ಟು ಆತನಿಗೆ ಎಲ್ಲವನ್ನು ಸಮರ್ಪಿಸಬೇಕು.

ದಯೆಯಿಲ್ಲದ ಧರ್ಮವಾವುದಯ್ಯಾ
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ
ದಯ ವೇ ಧರ್ಮದ ಮೂಲಯ್ಯ
ಕೂಡಲ ಸಂಗಮದೇವ

ದಯೆಯೇ ಧರ್ಮದ ಮೂಲ. ಸಕಲ ಪ್ರಾಣಿಗಳಲ್ಲಿ ದಯೆಯಿಂದ ವರ್ತಿಸಬೇಕು. ಸಕಲರ ಕಲ್ಯಾಣಕ್ಕಾಗಿ ಬಾಳಬೇಕು.

ಮರ್ತ್ಯಲೋಕವೆಂಬುದು ಕರ್ತಾರನ
ಕಮ್ಮಟವಯ್ಯ;
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ
ಕೂಡಲ ಸಂಗಮದೇವ

ಯಾರು ಇಲ್ಲಿ ಅವರು ಸಲ್ಲುವವರೋ ಅಲ್ಲಿಯೂ ಸಲ್ಲುವರು. ಸಂಸಾರದಲ್ಲಿ ಸರಿಯಾಗಿ ಬಾಳಬಲ್ಲವರೇ ಪಾರಮಾರ್ಥಿಕ ಜೀವನಕ್ಕೆ ಯೋಗ್ಯರಾಗುವರು. ಸಂಸಾರವನ್ನು ಬಿಟ್ಟು ಸನ್ಯಾಸ ಕೈಕೊಳ್ಳುವ ಅವಶ್ಯಕತೆ ಇಲ್ಲ.

'ಮಾಡುವೆ, ನೀಡುವೆ' ಎಂಬ ಅಹಂಕಾರ ವಿರಬಾರದು. ಮಾಡುವುದು ಅಂತರಂಗದ ಭಕ್ತಿಯಾಗಿರಬೇಕು. ಹೊರಗಿನ ಪ್ರದರ್ಶನ,

ಶ್ರೀಮತಿ ಎ. ಎಸ್. ಪಂಕಜ
ಎಂ.ಎ., ಬಿ.ಇಡಿ.

ಪ್ರಚಾರ, ಹೊಗಳಿಕೆಗಾಗಿ ಇರಬಾರದು. ಹೊರಗಿನ ವ್ರತಾಚಾರಗಳಿಗಿಂತ ಸದಾಚಾರ ಸದ್ಭಕ್ತಿಗಳಿಗೆ ಹೆಚ್ಚಿನ ಮಹತ್ತ್ವ ಕೊಡಬೇಕು. ಹೊರಗೆ ಒಳಗೆ ಹಸನಾದ ಬಾಳುವೆ ಸಾಗಿಸಬೇಕು. ಧರ್ಮಗ್ರಂಥ ಮತ್ತು ಸಂಪ್ರದಾಯಗಳಿಗಿಂತ ಶುದ್ಧ ಅಂತಃಕರಣಕ್ಕೆ ಹೆಚ್ಚಿನ ಮಹತ್ವವಿರಬೇಕು. ಜನ್ಮ, ಉದ್ಯೋಗ, ಸಂಪತ್ತು, ಅಂತಸ್ತು, ಸ್ತ್ರೀ-ಪುರುಷ– ಇಂತಹ ಯಾವ ಭೇದಭಾವವು ಇರಬಾರದು. ಧಾರ್ಮಿಕ ಜೀವನದಲ್ಲಿ ಎಲ್ಲರಿಗೂ ಸಮಾನವಾದ ಅವಕಾಶವಿರಬೇಕು.

ನಾಲಿಗೆಯ ಇಚ್ಛೆಗಾಗಿ ತಿನ್ನಬಾರದು, ಕುಡಿಯಬಾರದು. ಅನ್ನ ಪಾನೀಯಗಳನ್ನು ಶಿವನ ಪ್ರಸಾದವೆಂದು ಸ್ವೀಕರಿಸಬೇಕು. ಸದ್ವಿನಯವೇ ಸದಾಶಿವನ ಒಲುಮೆ. ದರ್ಪ, ಅಹಂಕಾರಗಳನ್ನು ತೋರಬಾರದು. ಉಪಜೀವನಕ್ಕೆ ಬೇಕಾಗುವಷ್ಟನ್ನು ಮಾತ್ರ ಬಳಸಿ ಉಳಿದುದನ್ನು ಪರಮಾತ್ಮನ ಕಾರ್ಯಕ್ಕಾಗಿ ಅರ್ಪಿಸಬೇಕು. ಮನಸ್ಸಿನ ಕೊಂಕನ್ನು ತಿದ್ದಿಕೊಂಡು ಪ್ರತಿಯೊಬ್ಬರೂ ಪೂಜೆ, ಧ್ಯಾನಗಳಲ್ಲಿ ತೊಡಗಿ ದೇವತ್ತ್ವದ ಹಂತಕ್ಕೆ ಏರುವುದು ಬಾಳಿನ ಗುರಿ.

ಬಸವಣ್ಣನವರು ಪ್ರಚಲಿತ ಸಮಾಜದ ಕುಂದು ಕೊರತೆಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದ್ದಾರೆ. ವಿಡಂಬನೆ, ಉಪದೇಶ ಇಲ್ಲಿ ಸಾಹಿತ್ಯಗುಣದಿಂದ ಕೂಡಿವೆ. ಕೆಲವು ಕಡೆಗೆ ಮಾತ್ರ ಮಾತು ಬಿರುಸಾಗಿದೆ, ಇಲ್ಲವೆ ತೀರ ಸರಳವಾಗಿದೆ.

"ಭಕ್ತರ ಕಂಡರೆ ಬೋಳರಪ್ಪಿರಯ್ಯಾ,
ಸವಣರ ಕಂಡರೆ ಬತ್ತಲೆಯಪ್ಪಿರಯ್ಯಾ
ಹಾರುವರ ಕಂಡರೆ ಹರಿನಾಮ ಎಂಬಿರಯ್ಯಾ
ಅವರವರ ಕಂಡರೆ ಅವರವರಂತೆ,
ಸೂಳೆಗೆ ಹುಟ್ಟಿದವರ ತೋರದಿರಯ್ಯಾ,
ಕೂಡಲಸಂಗಮದೇವರ ಪೂಜಿಸಿ,
ಅನ್ಯದೈವಂಗಳಿಗೆರಗಿ ಭಕ್ತರೆನಿಸಿಕೊಂಬ
ಅಜ್ಞಾನಿಗಳಿಗೇನೆಂಬೆನಯ್ಯಾ?''

'ಕಲ್ಲು ನಾಗರ ಕಂಡರೆ ಹಾಲನೆರೆ ಎಂಬರು, ದಿಟದ ನಾಗರ ಕಂಡರ ಕೊಲ್ಲೆಂಬರಯ್ಯಾ, ಉಂಬ ಜಂಗಮ ಬಂದರೆ ನಡೆಎಂಬರು, ಉಣ್ಣದ ಲಿಂಗಕ್ಕೆ ಬೋನವ ಹಿಡಿ ಎಂಬರಯ್ಯಾ.' 'ಕೊಲ್ಲುವನೇ ಮಾದಿಗ, ಹೊಲಸು ತಿಂಬವನೇ ಹೊಲೆಯ ಕುಲವೇನೂ, ಅವರಿಂದ ಕುಲವೇನೋ ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಸಂಗನ ಶರಣರೇ ಕುಲಜರು'– ಹೀಗೆ ಬಸವಣ್ಣನವರು ಜಾತಿಗೆ ಒಂದು ಹೊಸ ಗುಣಧರ್ಮವನ್ನು ಸೂಚಿಸಿದ್ದಾರೆ.

ಬಸವಣ್ಣನವರ ಉಪದೇಶಪರ ವಚನಗಳು ಸರ್ವಸಮಾನತೆ, ಭೂತದಯೆ, ನೀತಿನಿಷೆ, ಶಿವಭಕ್ತಿ ಇವನ್ನು ಕಳಕಳಿಯಿಂದ ತಿಳಿಸಿ ಹೇಳುವ ನವೀನ ಸ್ಮೃತಿಯಾಗಿವೆ. "ಲೋಕದ ಡೊಂಕ ನೀವೇಕೆ ತಿದ್ದುವಿರಿ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ. ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ...

ಸಾಮಾನ್ಯ ಜನರಿಗೂ ಸುಲಭವಾಗಿ ಅರ್ಥವಾಗುವಂತೆ ಬಸವಣ್ಣನವರು ಧರ್ಮದ ಕಲ್ಪನೆಯನ್ನು ಸುಗಮಗೊಳಿಸಿದರು. ಈ ಬಗೆಗೆ ಬಸವ ವಾಣಿಯನ್ನು ಕೇಳಿ :

ದೇವಲೋಕ, ಮರ್ತ್ಯಲೋಕವೆಂಬುದು
ಬೇರಿಲ್ಲ ಕಾಣಿ, ಭೋ
ಸತ್ಯವ ನುಡಿವುದೇ ದೇವಲೋಕ, ಮಿಥ್ಯ ವನು
ನುಡಿವುದೇ ಮರ್ತ್ಯಲೋಕ,
ಆಚಾರವೇ ಸ್ವರ್ಗ, ಅನಾಚಾರವೇ ನರಕ,
ಅಯ್ಯಾ ಎಂದಡೆ ಸ್ವರ್ಗ, ಎಲವೋ
ಎಂದಡೆ ನರಕ...

ಇವರ ವಚನಗಳಲ್ಲಿ ಅಧ್ಯಾತ್ಮಿಕತೆ ಹಾಗೂ ನೀತಿ ಪ್ರತಿಪಾದಿತವಾಗಿವೆ. 'ಕುಂಬಳದ ಕಾಯಿಗೆ ಕಬ್ಬುನದ ಕಟ್ಟುಕೊಟ್ಟರೆ ಬಲು ಹಾಗ ಬಲ್ಲದೆ?' 'ಸಗಣಿಯ ಬೆನಕಂಗೆ ಸಂಪಿಗೆಯರಳಿನಲ್ಲಿ ಪೂಜಿಸಿದರೆ ರಂಜನೆಯಲ್ಲದೆ ಅದರ ಗಂಜಳ ಬಿಡದಣ್ಣ' –ಇಲ್ಲಿಯ ಲೌಕಿಕ ದೃಷ್ಟಾಂತವನ್ನೂ ಸಹಜ ಪ್ರಾಸದ ಲಾಲಿತ್ಯವನ್ನೂ ಸವಿಯಬೇಕು.

ಬಸವಣ್ಣನವರು ನೀತಿ ಪ್ರಧಾನವಾದ ಧರ್ಮವನ್ನು ಜನತೆಗೆ ಬೋಧಿಸಿದರು. ಸಮಾಜ ಜೀವನವು ಸುಸೂತ್ರವಾಗಿ ನಡೆಯಲು ಅವಶ್ಯಕವಾದ ನೀತಿಯನ್ನು ಬಸವಣ್ಣನವರು ಒತ್ತಿ ಹೇಳಿದರು.

ಕಳಬೇಡ, ಕೊಲಬೇಡ, ಹುಸಿಯ
ನುಡಿಯಲುಬೇಡ,
ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ
ತನ್ನ ಬಣ್ಣಿಸಬೇಡ, ಇದಿರಹಳಿಯಲುಬೇಡ,
ಇದೇ ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ,
ಇದೇ ನಮ್ಮ ಕೂಡಲ ಸಂಗಮದೇವರ–
ನೊಲಿಸುವ ಪರಿ

ನಮ್ಮ ಬಾಳು ಒಳಗೂ ಹೊರಗೂ ಹಸನಾಗಿರಬೇಕು. ಅದೇ ಪರಮಾತ್ಮನನ್ನು ಒಲಿಸುವ ಹಾದಿ. ಪರಮಾತ್ಮನು ಒಲಿದರೆ ನಮ್ಮ ಬಾಳೆಲ್ಲ ಆನಂದಮಯ ವಾಗುವುದು.

ಕೆಲವರು ಗುಡಿ ಕಟ್ಟಿಸುವುದು, ದೊಡ್ಡ ಸಮಾರಂಭ ಮಾಡುವುದು ಧರ್ಮವೆಂದು ಬಾವಿಸುತ್ತಾರೆ ಆದರೆ ಬಸವಣ್ಣ ಹೇಳುತ್ತಾರೆ:

ಉಳ್ಳವರು ಶಿವಾಲಯವ ಮಾಡಿದರು,
ನಾನೇನು ಮಾಡಲಯ್ಯಾ, ಬಡವನು,
ಎನ್ನ ಕಾಲೆ ಕಂಭ, ದೇಹವೇ ದೇಗುಲ
ಶಿರವೇ ಹೊನ್ನ ಕಲಶವಯ್ಯಾ
ಕೂಡಲಸಂಗಮದೇವ ಕೇಳಯ್ಯಾ ಸ್ಥಾವರಕೆ
ಅಳಿವುಂಟು ಜಂಗಮಕ್ಕಿಲ್ಲ

ನಮ್ಮ ದೇಹವನ್ನೇ ದೇವಾಲಯ ಮಾಡಬೇಕೆಂಬ ಬೆಲೆಯುಳ್ಳ ಬೋಧೆಯಿದು. ನಮ್ಮ ದೇಹವೆಂಬ ದೇವಾಲಯದಲ್ಲಿ ಪರಮಾತ್ಮನ ಮೂರ್ತಿಯನ್ನು ನಾವು ಕಾಣಬೇಕು. ಹೊರಗಿನ ಪೂಜೆ, ವಿಧಿ, ಆಚಾರಗಳು ಮಹತ್ವದವಲ್ಲವೆಂಬುದೇ ಬಸವಣ್ಣನವರ ದೃಷ್ಟಿಯಾಗಿದೆ. ಪ್ರದರ್ಶನ ಪ್ರಿಯತೆಯು ಅವರಿಗೆ ಒಪ್ಪಿಗೆಯಾಗಿರಲಿಲ್ಲ. ಲೋಕೋಪಚಾರಕಕ್ಕಾಗಿ ಮಾಡುವ ಪೂಜೆ, ದಾನಗಳ ಬಗೆಗೆ ಅವರು 'ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ, ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ'. ಎಂದು ಹೇಳಿದ್ದಾರೆ. ದೇವರ ಕೃಪೆ ದೊರೆಯ ಬೇಕಾದರೆ 'ಮಾಡುವ ನೀಡುವ ನಿಜ ಗುಣವಿರಬೇಕು' ಅರೆ ಮನದಿಂದ ಮಾಡುವುದನ್ನು ಕುರಿತು ಅವರು, 'ದೇಗುಲಕೆ ಹೋಗಿ ನಮಸ್ಕಾರ ಮಾಡುವನಂತೆ ತನ್ನ ಕೆರಹಿನ ಧ್ಯಾನವಲ್ಲದೆ ದೇವರ ಧ್ಯಾನವಿಲ್ಲ' ಎಂಬ ದೃಷ್ಟಾಂತವನ್ನು ಕೊಟ್ಟಿದ್ದಾರೆ.

ಈ ಸಾಮಾನ್ಯ ಮಾನವರಿಗೆ ಹೊಗಳಿಸಿಕೊಳ್ಳುವ ಹಂಬಲವಿರುತ್ತದೆ. ಆದರೆ ಬಸವಣ್ಣನವರು ಹೊಗಳಿಕೆಯನ್ನು "ಹೊನ್ನ ಶೂಲ"ಎಂದು ಕರೆದಿದ್ದಾರೆ ಆದ್ದರಿಂದ ಅವರು ಶಿವನನ್ನು ಕುರಿತು– 'ನೀನು ಎನಗೆ ಒಳ್ಳಿದನಾದರೆ ಎನ್ನ ಹೊಗಳಿಕೆಗೆ ಅಡ್ಡ ಬಾರಾ' ಎಂದು ಪ್ರಾರ್ಥಿಸಿದ್ದಾರೆ; ಬಸವಣ್ಣನವರು ಯಾರಿಂದಲೇನು–ದೇವರನ್ನೂ ಸಹ ತನಗೆ ಇದು ಬೇಕು ಅದು ಬೇಕು ಎಂದು ಬೇಡಲಿಲ್ಲ.

ಕಾಯದ ಕಳವಳಕ್ಕಂಜಿ 'ಕಾಯಯ್ಯಾ'
ಎನ್ನೆನು,
ಜೀವನೋಪಾಯಕ್ಕಂಜಿ 'ಈಯಯ್ಯಾ'
ಎನ್ನೆನು
'ಯದ್‌ಭಾವಂತದ್‌ಭವತಿ' ಉರಿ ಬರಲಿ
ಸಿರಿ ಬರಲಿ,
ನಿಮ್ಮಹಾರೆನು, ಮಾನವರ ಬೇಡೆನು, ಆಣೆ,
ನಿಮ್ಮಾಣೆ ಕೂಡಸಂಗಮ ದೇವ.

ಅವರಿಗೆ ಯಾವ ಅಂಜಿಕೆಯೂ ಇರಲಿಲ್ಲ. 'ನಾಳೆ ಬಪ್ಪುದು ಎಮಗಿಂದೆ ಬರಲಿ, ಇಂದು ಬಪ್ಪುದು ನಮಗೀಗಲೆ ಬರಲಿ ಇದಕಾರಂಜುವರು, ಇದಕಾರಳುಕುವರು?' ಪರಮಾತ್ಮನೊಬ್ಬನನ್ನೇ ಅವರು ಆಶ್ರಯಿಸಿದ್ದರಿಂದ ಈ ಬಗೆಯ ನಿರ್ಭಯತೆ ಅವರಿಗೆ ಸಾಧ್ಯವಾಗಿತ್ತು. 'ತಂದೆ ನೀನು, ತಾಯಿ ನೀನು, ಬಂದು ನೀನು, ಬಳಗ ನೀನು, ನೀವಲ್ಲದೆ ಮತ್ತಾರೂ ಇಲ್ಲವಯ್ಯಾ, ಕೂಡಲ ಸಂಗಮದೇವ ಹಾಲಲ್ಲಿ ಅದ್ದು, ನೀರಲ್ಲಿ ಅದ್ದು.'

( 38ನೇ ಪುಟ ನೋಡಿ )

ಕಿಶೋರಜಗತ್

# ಭದ್ರಾಚಲ ರಾಮದಾಸರು

ಪ್ರೇಮಲೀಲಾ ನಾರಾಯಣಮೂರ್ತಿ

ಭಾರತದೇಶ ಭಕ್ತಭಾಗವತರ ತೌರೂರು, ಅಸಂಖ್ಯ ಭಕ್ತಶಿರೋಮಣಿಗಳಿಗೆ ಜನ್ಮ ನೀಡಿದ ತಪೋಭೂಮಿ, ಮಹಿಮಾನ್ವಿತರ ಪಾದಸ್ಪರ್ಶದಿಂದ ಪುನೀತಗೊಂಡ ಭವ್ಯ ಕ್ಷೇತ್ರ. ಇಂತಹ ಪವಿತ್ರ ಮಾತೃಭೂಮಿಯಲ್ಲಿ ಜನ್ಮ ಎತ್ತಿ ಅಕ್ಷಯ ಕೀರ್ತಿಯನ್ನು ಗಳಿಸಿ ಶಾಶ್ವತ ಸದ್ಗತಿಯನ್ನು ಹೊಂದಿದ ನರಪುಂಗವರಲ್ಲಿ ಭದ್ರಾಚಲ ರಾಮದಾಸರೂ ಒಬ್ಬರು. ಇವರು ರಾಮನ ಪರಮ ಭಕ್ತರು. ಶ್ರೀರಾಮ ದೇವಾಲಯದ ಗೋಪುರ ಪ್ರಾಕಾರಾದಿಗಳ ನಿರ್ಮಾಣಕ್ಕಾಗಿ ತಮ್ಮ ಸ್ವಾಧೀನದಲ್ಲಿದ್ದ ತಹಶೀಲಿನ ರಾಜಕೀಯ ದ್ರವ್ಯವನ್ನು ಉಪಯೋಗಿಸಿದ್ದುದರಿಂದ ಗೋಲ್ಕೊಂಡ ರಾಜ್ಯದ ನವಾಬ ಇವರನ್ನು 12 ವರ್ಷ ಬಂಧನದಲ್ಲಿರಿಸಿದಾಗ ಕರುಣಾಳು ರಾಮನೇ ಲಕ್ಷ್ಮಣನೊಂದಿಗೆ ಬಂದು ರಾಜನಿಗೆ ದ್ರವ್ಯ ತಲುಪಿಸಿ ಬಂಧನದಲ್ಲಿದ್ದ ರಾಮದಾಸರನ್ನು ಬಿಡುಗಡೆ ಮಾಡಿಸಿದರೆಂದು ಈ ಕಥಾಭಾಗದಿಂದ ತಿಳಿಯುತ್ತೇವೆ. ಭಕ್ತ ಮಹಾಶಯರ ಕಥನದಿಂದ ನಮ್ಮಲ್ಲಿಯೂ ಒಮ್ಮೆಯಾದರೂ ಭಕ್ತಿರಸ ಹೊಮ್ಮಿ ಆನಂದ ಪರವಶರಾಗುವ ಅವಕಾಶ ದೊರೆತೇ ದೊರೆಯುವುದು.

ಸಹಜವಾಗಿ ಭಕ್ತಮಹಾಶಯರುಗಳನುಭವಿಸುವಂತೆ ನಮ್ಮ ಕಥಾನಾಯಕರೂ ಆರಂಭದಿಂದಲೇ ಕಷ್ಟಕೋಟಲೆಗಳ ಹೊಡೆತಕ್ಕೆ ಸಿಲುಕಿಕೊಂಡಿದ್ದರು. ನೆಲಗೊಂಡಪಲ್ಲಿಗ್ರಾಮದಲ್ಲಿ "ಲಿಂಗನಮಂತ್ರಿ, ಕಾಮಮ್ಮ" ಎಂಬ ಆಂಧ್ರ ಬ್ರಾಹ್ಮಣ ಕುಟುಂಬದಲ್ಲಿ ಜನ್ಮಧರಿಸಿ, ಗೋಪನ್ನನೆಂಬ ನಾಮಾಂಕಿತ ಹೊಂದಿ ಎಳೆಂಟುವರ್ಷಗಲ್ಲೇ ಗುರುಗಳ ಕರುಣೆ ಯಿಂದ ಸಂಸ್ಕೃತ ಮತ್ತು ಆಂಧ್ರಭಾಷೆಯಲ್ಲಿ ಪಾಂಡಿತ್ಯ ಹೊಂದಿ ಹತ್ತನ್ನೆರಡು ವರ್ಷಗಳಲ್ಲೇ ತಂದೆ ತಾಯಿಗಳನ್ನು ಕಳೆದುಕೊಂಡು ಏಕಾಂಗಿಯಾದರು. ಒಬ್ಬಂಟಿಗರಾದರೂ ಗ್ರಾಮದವರಿಗೆ ಅಚ್ಚುಮೆಚ್ಚಾಗಿದ್ದು ಸತ್ಕಾರ್ಯಗಳಲ್ಲಿ ಭಾಗವಹಿಸುತ್ತಾ, ನಿಸ್ವಾರ್ಥದಿಂದ ಸರ್ವರಿಗೂ ನೆರವಾಗುತ್ತಾ ಕೋಪತಾಪಗಳ ನೆಲೆಯನ್ನೇ ಅರಿಯದೆ ಹಸನ್ಮುಖರಾಗಿ ಎಲ್ಲರ ಪ್ರೀತಿಗೂ ಪಾತ್ರರಾಗಿದ್ದರು. ಚಿಂತಾರಹಿತರಾಗಿ ಪರೋಪಕಾರ ಹರಿಭಜನೆಯಲ್ಲಿ ಮೈಮರೆತಿರುತ್ತಿದ್ದುದರಿಂದ ಇವರ ವದನಾರವಿಂದದಲ್ಲಿ ದಿವ್ಯ ಕಳೆ ಮಿನುಗುತ್ತಿತ್ತು.

ಒಂದಾನೊಂದು ಚೈತ್ರಮಾಸದಲ್ಲಿ ಗ್ರಾಮಸ್ಥರು ಸೇರಿ ಶ್ರೀರಾಮೋತ್ಸವವನ್ನು ಜರುಗಿಸುವ ಪ್ರಯತ್ನ ನಡೆಯಿತು. ಕಾರ್ಯಗಳು ಬಹಳ ವಿಜೃಂಭಣೆಯಿಂದ ಸಾಗುತ್ತಿತ್ತು. ಪರಸ್ಥಳದಿಂದ ಅನೇಕಮಂದಿ ಭಕ್ತರು, ಭಾಗವತರು ಬಂದು ಸ್ವಾಮಿಯನ್ನು ಸೇವಿಸುತ್ತಿದ್ದರು. ಇವರಲ್ಲಿ ಉತ್ತರ ದೇಶದಿಂದ ಬಂದ ಮುಸಲ್ಮಾನ ಸಾಧುವರ್ಯರೂ ಒಬ್ಬರು, ನೆರೆದಿದ್ದ ಜನ ಇವರನ್ನು ಒಳಗೆ ಬಿಡಲು ಒಪ್ಪಲಿಲ್ಲ. ಮುಂದೆ ರಾಮದಾಸರೆಂದು ಪ್ರಖ್ಯಾತರಾಗುವ 'ಗೋಪನ್ನ'ನು ದಯಾರ್ದ್ರ ಹೃದಯನಾದುದರಿಂದ ಎಲ್ಲರ ಅನುಮತಿ ಹೊಂದಿ ಆ ಸಾಧುವು ಒಳಗೆ ಪ್ರವೇಶಿಸುವುದಕ್ಕೆ ನೆರವು ನೀಡಿದನು. ದೇವತಾದರ್ಶನದಿಂದ ಪರಮಾನಂದ ಹೊಂದಿ ಮೈಮರೆತ ಆ ಸಾಧು ಇಷ್ಟದೈವವಾದ ಶ್ರೀರಾಮನನ್ನು ಮನೋಹರ ಗೀತೆಗಳಿಂದ ಹಾಡಲಾರಂಭಿಸಿದನು. ಈ ಸಂಗತಿ ಧರ್ಮಾಧಿಕಾರಿಗೆ ತಿಳಿದು, ಒಡನೆ ಆಲಯದ ಬಳಿ ಬಂದು ಆ ಸಾಧುವನ್ನು ಕಠಿನ ವಚನಗಳಿಂದ ಬೈದು ಹೊರತಳ್ಳಿಸಿದನು. ಆ ತಕ್ಷಣವೇ ಗರ್ಭಗೃಹದಲ್ಲಿ ಶೋಭಾಯಮಾನವಾಗಿ ನಿಂತಿದ್ದ ದೇವತಾ ವಿಗ್ರಹಗಳು ಮಾಯವಾಯಿತು. ಇದಕ್ಕೆ ಕಾರಣ ತಿಳಿಯದೆ ಕೋಪಾವೇಶವಾಗಿ ಸಿಡಿಮಿಡಿಗೊಳ್ಳುತ್ತಾ ಕೂಗಾಡುತ್ತಿರಲು ಕೆಲವರು ಹೊರತಳ್ಳಿಸಿದ ಆ ಸಾಧುವನ್ನೇ ಒಳಗೆ ಬರಮಾಡಿಸಿ ಹಾಡುವುದಕ್ಕೆ ಅನುಮತಿಕೊಡುವಂತೆ ತಿಳಿಸಿದರು. ಆ ಧರ್ಮಾಧಿಕಾರಿಯು ಅದೇರೀತಿ ಮಾಡಲು ಮಾಯವಾದ ದೇವತಾ ವಿಗ್ರಹಗಳು ಮರಳಿ ಆ ಸ್ಥಳದಲ್ಲೇ ಗೋಚರಿಸಿದುವಂತೆ. ರಾಮದಾಸರಿಗೆ ಮಾತ್ರ ಸೂಕ್ತಗುರುವು ದೊರೆತಂತಾಯಿತು. ಅವರಿಂದ ರಾಮ ಮಂತ್ರೋಪದೇಶವನ್ನೂ ಹೊಂದಿದರು

ಸದಾ ಸತ್ಕಾರ್ಯದಪೇಕ್ಷೆ, ಸುಗುಣವಲಯಗಳಲ್ಲೇ ಓಡಾಡುವ ಮನಸ್ಸಿದ್ದುದದರಿಂದ ರಾಮದಾಸರ ಚಿತ್ತಹೃದಯಗಳೆರಡೂ ಪರಿಪಕ್ವನಾಗಿತ್ತು. ಅಂಥ ಫಲವತ್ತಾದ ಭೂಮಿಯಲ್ಲಿ ರಾಮನಾಮವೆಂಬ ಬೀಜ ಬಿತ್ತಿದೊಡನೆ ಅದು ಸಮೃದ್ಧವಾಗಿ ಬೆಳೆದು ಯಾರಿಂದಲೂ ಅಲುಗಿಸಲಾಗದಷ್ಟು ಭದ್ರ ಬೇರುಗಳನ್ನೂ ಬಿಟ್ಟಿತು. ದೈವವನ್ನು ಕಾಣುವ ಹುಚ್ಚು ಹಿಡಿಯುವವರೆಗೂ ದೈವಸಾಕ್ಷಾತ್ಕಾರವಾಗುವುದಿಲ್ಲವೆಂಬಂತೆ ಇವರಿಗೂ ಲೌಕಿಕ ವಿಷಯದಲ್ಲಿ ಅನಾಸಕ್ತಿ ಉಂಟಾಗಿ ರಾಮನಾಮ ಸ್ಮರಣೆಯಲ್ಲೇ ಮನಸ್ಸು ಹರಿಯುತ್ತಿದ್ದುದರಿಂದ ಲೌಕಿಕರ ದೃಷ್ಟಿಯಲ್ಲಿ ಇವರೂ ಹುಚ್ಚರಂತೆಯೇ ಕಾಣುತ್ತಿದ್ದರು. ಇದೇ ಸುಸಂದರ್ಭವೆಂದರಿತ ವಂಚಕರು ವಂಚನೆಯಿಂದ ಇವರ ಪಿತ್ರಾರ್ಜಿತ ಆಸ್ತಿಯನ್ನೆಲ್ಲಾ ಕಬಳಿಸಿದರು. ಆದರೂ ಇವರ ಮನಸ್ಸು ಮಾತ್ರ ನಿಶ್ಚಲತೆಯನ್ನು ಬಿಡಲಿಲ್ಲ. "ಎಡಬಿಡದೆ ನಂಬಿದ ದೈವ ಸಕಾಲಕ್ಕೆ ಯಾರ ಮೂಲಕವಾಗಿಯೋ ಬಂದು ದಾರಿತೋರಿಸಿ ರಕ್ಷಾಕವಚವಾಗಿ ನಿಲ್ಲುವುದೆಂಬ" ನಾಣ್ಣುಡಿಯಂತೆ ಹುಚ್ಚರಾಗಿ ಎಲ್ಲೆಂದರಲ್ಲೇ ಕುಳಿತು, ಮಲಗಿ ಕಾಲ ಕಳೆಯುತ್ತಿದ್ದ ಇವರಿಗೆ ಇವರ ತಂದೆಯ ಆಪ್ತ ಸ್ನೇಹಿತರ ಸಲಹೆ ಜೀವನದಲ್ಲಿ ಉನ್ನತಿಗೆ ಸೇರಲು ನೆರವು ನೀಡಿತು. ಕಷ್ಟದಲ್ಲಿರುವವರಿಗೆ ನೇರವಾಗಿ ಸಹಾಯಮಾಡುವುದಕ್ಕೆ ಅಸಮರ್ಥರಾದರೂ ಸಹಾಯಕರನ್ನು ತೋರಿಸಿ ಪುಣ್ಯಗಳಿಸಿದ ಇವರ ಪಿತನ ಸ್ನೇಹಿತರು ಗೋಲ್ಕೊಂಡ ರಾಜ್ಯದಲ್ಲಿ ಮಂತ್ರಿಗಳಾಗಿದ್ದ, ಲಿಂಗನಮಂತ್ರಿಯ ಭಾವಮೈದಂದಿರಾದ ಅಕ್ಕನ್ನ-ಮಾದನ್ನರೆಂಬುವರ ಬಳಿಗೆ ರಾಮದಾಸರ ತಂದೆ ತಾಯಿ ಮೃತಪಟ್ಟ ವಿಷಯ ತಿಳಿಸಿ ಅವರ ಅಳಿಯನಾದ ಇವರ ವಂಶೋದ್ಧಾರ ಮಾಡುವಂತೆ ಪ್ರಾರ್ಥಿಸಬೇಕೆಂದು ಯೋಚಿಸಿದರು. ಓರ್ವಬುದ್ಧಿಜೀವಿಯ ಸಹಾಯದಿಂದ ಯೋಜನೆಯೂ ನೆರವೇರಿತು. ಹಿರಿಯರ ಹಾಗೂ ಹಿತಚಿಂತಕರ ಆದೇಶದಂತೆ ನಮ್ಮ ಕಥಾನಾಯಕರೂ ಸ್ವಗ್ರಾಮಬಿಟ್ಟು ಸೋದರ ಮಾವನ ಮನೆಗೆ ತೆರಳಿದರು. ಗೋಪನ್ನನ ಸರಳಸ್ವಭಾವ, ಸದ್ಗುಣ ಸದಾಚರಣೆ, ವಿನಯ ವಿಧೇಯತೆ, ಭಗವದ್ಭಕ್ತಿ ಕೆಲವೇ ದಿನಗಳಲ್ಲಿ ಇವರ ಮಾವಂದಿರ ಮನಸ್ಸನ್ನೇ ಸೂರೆಗೊಂಡಿತು. ಕೊನೆಗೆ ಇವರ ಮಾವ ಮಾದನ್ನ ತಮ್ಮ ಮಗ



# ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೆ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್**
ಪಬ್ಲಿಕೇಷನ್ ಸೆಕ್ಷನ್
ಟಿ. ಟಿ. ಡಿ.
ತಿರುಪತಿ–517501

ಳನ್ನು ಇವರಿಗೆ ಕೊಟ್ಟು ವಿವಾಹವನ್ನೂ ನೆರವೇರಿಸಿದರು.

ಗೋಲ್ಕೊಂಡರಾಜ್ಯದ ಒಡೆಯ ತಾನೀಷಾನ ಉದಾರತೆಯಿಂದ ರಾಮದಾಸರಿಗೆ ಭದ್ರಾಚಲ ತಹಶೀಲಿನ ಅಧಿಕಾರತ್ತ್ವ ನಿರ್ವಹಣೆಯ ಕಾರ್ಯ ದೊರಕಿತು. ತಮ್ಮ ಕಡೆ ಹರಿಯುತ್ತಿರುವ ಶ್ರೀರಾಮನ ಅನುಗ್ರಹಕ್ಕೆ ಅತ್ಯಂತ ಸಂತುಷ್ಟರಾಗಿ ಪತ್ನಿ ಹಾಗೂ ಏಕಮಾತ್ರ ಪುತ್ರನೊಂದಿಗೆ ಭದ್ರಾಚಲವನ್ನು ಹೊಕ್ಕು ನಿವಸಿಸಲಾರಂಭಿಸಿದರು, ಮಹಾತ್ಮರ ದಿವ್ಯ ಪಾದಸ್ಪರ್ಶದಿಂದ ಮತ್ತು ಉನ್ನತ ಆದರ್ಶಗಳಿಂದ ಇಡೀಗ್ರಾಮವೇ ಪುನೀತವಾಗ ತೊಡಗಿತು. ಯಾವ ಗ್ರಾಮದಲ್ಲಿ ಹಿರಿಯ ಅಧಿಕಾರಿಗಳು ಸನ್ಮಾರ್ಗದಲ್ಲಿ ನಡೆಯುವರೋ ಆ ಗ್ರಾಮದಲ್ಲಿ ಅನುಯಾಯಿಗಳೂ, ಕಿರಿಯರೂ ಅದೇರೀತಿ ನಡೆಯುವಂತೆ ಭದ್ರಾಚಲದಲ್ಲೂ ಎಲ್ಲರೂ ಸದ್ಗುಣ ಸಂಪನ್ನರಾಗಿದ್ದರು. ಅಧಿಕಾರದಲ್ಲಿದ್ದರೂ ದರ್ಪ ಅಭಿಮಾನಗಳಿಲ್ಲದೆ, ಕೋಪತಾಪಗಳಿಲ್ಲದೆ, ಸಾಮಾನ್ಯ ವ್ಯಕ್ತಿಯಂತೆ ತಾವೂ ಎಲ್ಲರೊಡನೆ ಬೆರೆಯುತ್ತಾ, ಮಿತವ್ಯಯದಿಂದ ಜೀವನ ನಡೆಸುತ್ತಾ ಸದಾಕಾಲ ಮನೆಯಲ್ಲಿ ರಾಮಭಜನೆ, ಪೂಜೆ, ಕೀರ್ತನೆ, ಕಥಾಕಲಾಕ್ಷೇಪ, ಮುಂತಾದುವುಗಳನ್ನು ನಡೆಸುತ್ತಿದ್ದರು. ಸದಾ ಸುಭಿಕ್ಷವಾಗಿದ್ದುದರಿಂದ ಅಲ್ಲಿಯ ರೈತರೂ, ಕಾರ್ಮಿಕವರ್ಗದವರೂ, ವ್ಯಾಪಾರಿಗಳೂ ತಾವು ಸರ್ಕಾರಕ್ಕೆ ಸಲ್ಲಬೇಕಾದ ಕಂದಾಯ, ತೆರಿಗೆಗಳನ್ನು ಕಾಲ ಕಾಲಕ್ಕೆ ಸಲ್ಲಿಸುತ್ತಿದ್ದರು. ಈ ರೀತಿ ಇದ್ದುದರಿಂದ ಆ ಗ್ರಾಮ ಸುಖಶಾಂತಿಗಳ ಆಗರವೇ ಆಗಿ ಶೋಭಾಯಮಾನವಾಗಿ ಮಿನುಗುತ್ತಿತ್ತು. ರಾಜನಿಂದಲೂ ಒಳ್ಳೇ ಗೌರವವನ್ನು ಪಡೆದಿತ್ತು.

ಬಾಲ್ಯದಿಂದಲೂ ಇವರ ಅಂತರಾಳದಲ್ಲಿ ಹುದುಗಿದ್ದ ಶ್ರೀರಾಮನ ಮೇಲಿನ ಪ್ರೀತಿ ಅಧಿಕಾರಕ್ಕೆ ಬಂದಮೇಲೆ ಇನ್ನೂ ಹೆಚ್ಚಿನ ಸೇವೆಯನ್ನು ಆ ದೈವಕ್ಕೆ ಸಲ್ಲಿಸುವ ಸುಯೋಗ ಕೂಡಿಬಂತು. ಸದಾ ಭಕ್ತ ಭಾಗವತರ, ಮಹಾತ್ಮರ, ನಿವಾಸಸ್ಥಾನವಾದ ಇವರ ಮನೆಯಲ್ಲಿ, ಒಮ್ಮೆ ಸಾವಿರಾರು ಬ್ರಾಹ್ಮಣ ಸುವಾಸಿನಿಯರ ಸಮಾರಾಧನೆ ಜರುಗುತ್ತಿತ್ತು. ಇವರು ಅತಿಥಿ ಸೇವೆಯಲ್ಲೇ ನಿಮಗ್ನರಾಗಿ ಹೊರಮನೆಯಲ್ಲೇ ಇದ್ದರು. ಒಳಗೆ ಹಟಾತ್ತಾಗಿ ಇವರ ಚಿಕ್ಕಮಗ ಬಹು ಎತ್ತರವಾದ ಮೆಟ್ಟಲಿನಿಂದ ಬಿದ್ದು ಮೃತನಾದನು. ಆ ಭಯಂಕರ ದೃಶ್ಯ ಕಂಡ ಇವರ ಭಾರ್ಯೆ ದಿಕ್ಕು ತೋರದವಳಾಗಿ ಮನದಲ್ಲೇ ದುಃಖಿಸುತ್ತಾ ಯೋಚಿಸತೊಡಗಿದಳು. ಒಂದು ವೇಳೆ ತನ್ನ ಮಗನ ಮರಣವಾರ್ತೆಯನ್ನು ಆದರಾತಿಥ್ಯದಲ್ಲಿ ನಿಮಗ್ನರಾದ ಪತಿರಾಯರಿಗೆ ತಿಳಿಸಿದರೆ ಆತಿಥ್ಯಕ್ಕೆ ವಿಘ್ನ ಉಂಟಾಗಬಹುದೆಂದು ಊಹಿಸಿ ಒಳಗೆ ಹರಿಯುತ್ತಿರುವ ದುಃಖಸಾಗರವನ್ನೇ ತನ್ನ ಹೃದಯದ ಪಾತ್ರೆಯಲ್ಲಿ ತುಂಬಿಟ್ಟುಕೊಂಡು ಅತಿಥಿಗಳು ಹೋದ ತರುವಾಯ ಪತಿಯನ್ನು ಕರೆದು ನಡೆದ ಸಂಗತಿಯನ್ನೆಲ್ಲಾ ವಿಶದವಾಗಿ ತಿಳಿಸಿದಳು.

ಪುತ್ರ ಮರಣಕ್ಕಾಗಿ ಇವರು ಅಲ್ಪ ಕಣ್ಣೀರೂ ಹಾಕದೆ ತನ್ನ ಭಾರ್ಯೆ ತಾಳ್ಮೆ ವಹಿಸಿ ಸಮಾರಾಧನೆ ನಿರ್ವಿಘ್ನವಾಗಿ ನಡೆಸಿದುದಕ್ಕೆ ಆನಂದಗೊಂಡು ಆಕ್ಷಣವೇ ಬಾಲಕನ ಶವವನ್ನೆತ್ತಿಕೊಂಡು ಶ್ರೀರಾಮನ ಬಳಿಗೆ ನಡೆದು ದೇವರಿಗೆ ಅಭಿಮುಖವಾಗಿ ಬಾಲಕನನ್ನು ಮಲಗಿಸಿ ಪ್ರಾರ್ಥಿಸತೊಡಗಿದರು. "ಭಕ್ತಪರಾಧೀನನಾದ ಓ ತಂದೆ! ನಿನ್ನ ಭಕ್ತನ ಕಣ್ಣೆದುರಿಗೇ ಮಗ ಮೃತನಾಗುವುದು ಧರ್ಮ ಸಮ್ಮತವೆ? ಹಿಂದೆ ಅಯೋಧ್ಯೆಯಲ್ಲಿ ಬ್ರಾಹ್ಮಣನ ಜೀವಿತಕಾಲದಲ್ಲೇ ಮೃತನಾದ ಆತನ ಪುತ್ರನನ್ನು ನೀನು ಬದುಕಿಸಲಿಲ್ಲವೆ? ಅದೇ ರೀತಿ ಈ ಬಾಲಕನನ್ನು ಬದುಕಿಸಿ ಉದ್ಧರಿಸು" ಎಂದು ಮನದುಂಬಿ ಪ್ರಾರ್ಥಿಸುತ್ತಿರಲು, ಅರ್ಚಕರು ಶ್ರೀರಾಮ ಪಾದ ತೀರ್ಥವನ್ನು ಬಾಲಕನ ಮೇಲೆ ಪ್ರೋಕ್ಷಿಸಿದರು. ತಕ್ಷಣವೇ ಆ ಬಾಲಕನು ನಿದ್ದೆಯಿಂದೆಚ್ಚೆತ್ತಂತೆ ಎದ್ದು ಕುಳಿತನಂತೆ. ಈ ಘಟನೆಯಿಂದ ಎಲ್ಲರೂ ಈತನನ್ನು ಮಹಾನುಭಾವನೆಂದು ಹೊಗಳಿದರು. ಇದಕ್ಕೂ ಹೆಚ್ಚಾಗಿ ಇವರಿಗೆ ಆ ಸ್ಥಾನದಲ್ಲಿ ರಾಮರು ಸಾಕ್ಷಾತ್ತಾಗಿ ನೆಲಸಿರುವರೆಂಬ ನಿಶ್ಚಯವುಂಟಾಯಿತು. ಅಂಥ ಭಗವತ್ಸಾನ್ನಿಧ್ಯದಲ್ಲಿ ತನ್ನಂಥ ಪಾಮರನು ಜೀವಿಸುವ ಸುಯೋಗ ಕೂಡಿಬಂದುದಕ್ಕಾಗಿ ಅತ್ಯಾನಂದಿಸಿ, ತನ್ನ ಜೀವಿತಕಾಲದಲ್ಲಿ ಆ ಕ್ಷೇತ್ರದ ಪುನರುದ್ಧಾರಗೊಳಿಸಬೇಕೆಂಬ ಯೋಚನೆ ಸ್ಫುರಿಸಿತು.

ರಾಮದಾಸರು ಜೀರ್ಣೋದ್ಧಾರಗೊಳಿಸಿದ ದೇವಾಲಯದಲ್ಲಿ ಸಹಸ್ರಾರುಮಂದಿ ಭಕ್ತಾದಿಗಳು ನೆರೆದು ಸ್ವಾಮಿಗೆ ಬ್ರಹ್ಮೋತ್ಸವ, ಮಹೋತ್ಸವ ಮುಂತಾದುವುಗಳನ್ನು ಮಾಡುತ್ತಾ ಹರ್ಷಿಸುತ್ತಿದ್ದರೂ, ರಾಜದ್ರೋಹ ಕಾರ್ಯದಿಂದ ಯಾವ ಆಪತ್ತೊದಗುವುದೋ ಎಂಬ ಭೀತಿ ಇವರಲ್ಲಿಲ್ಲದಿದ್ದರೂ ಇವರ ಆಪ್ತ ಬಂಧುಮಿತ್ರರಲ್ಲಿ ಕಾಡುತ್ತಿತ್ತು.

ಸರ್ಕಾರಕ್ಕೆ ಸಲ್ಲಬೇಕಾದ ಹಣ ರಾಮದಾಸರಿಂದ ಎಷ್ಟುದಿನಗಳಾದರೂ ಸಲ್ಲದಿದ್ದುದಕ್ಕೆ ತಾನೀಷಾ ರಾಜಭಟರ ಜೊತೆ ಪತ್ರವನ್ನು ಕಳುಹಿ ಅವರನ್ನು ಕರೆತರುವಂತೆ ಆಜ್ಞಾಪಿಸಿದನು. ರಾಜನಾಜ್ಞಾಪರಿಪಾಲಕರಾದ ಸೇವಕರು ಯಥಾ ಪ್ರಕಾರ ಕಾರ್ಯ ಕೈಗೊಂಡರು. ಅಧಿಕಾರವಲ್ಲಿದ್ದಾಗ ಇವರು ಎಷ್ಟು ತೃಪ್ತಿಯಿಂದಿದ್ದರೋ ಅಷ್ಟೇ ತೃಪ್ತಿಯಿಂದ ಸೇವಕರ ಜೊತೆ ಹೊರಟಾಗಲೂ ಇದ್ದು, ಅದೂ ಶ್ರೀರಾಮನ ಪ್ರಸಾದವೆಂದೇ ಸ್ವೀಕ

(36ನೇ ಪುಟ ನೋಡಿ)

6 ನೇ ಪುಟದಿಂದ )

ವಾಗುತ್ತದೆ, ಮತ್ತು ಆ ಸಾದಬ್ರಹ್ಮರವರು 'ಪ್ರಹ್ಲಾದ ಭಕ್ತಿ ವಿಜಯ' ಬರೆದಿದ್ದಾರೆ.

ದಾಸರ ಕೀರ್ತನೆಗಳಲ್ಲಿ ಕೃಷ್ಣ ಸಂಕೀರ್ತನಗಳು ಹೆಚ್ಚು. ಇವುಗಳಲ್ಲಿ ಬಾಲ ಕೃಷ್ಣ ಲೀಲೆಗಳು, ಗೋಪಿಕಾಗೀತೆಗಳು, ಮಾಧುರ್ಯ ಭಕ್ತಿ ಪದಗಳು ಕಾಣಬಹುದು. ಕೃಷ್ಣ ಎನ ಬಾರದೆ, ಕಳ್ಳ ಎನ್ನಲು ಬೇಡ, ದೃಷ್ಟಿತಾಕಿತೆ ನಮ್ಮ ಕೃಷ್ಣ ರಾಯನಿಗೆ, ದೂರು ಮಾಡುವರೇನೆ, ಅಮ್ಮ ನಿಮ್ಮ ಮನೆಗಳಲ್ಲಿ ನಮ್ಮ ರಂಗನ ಕಾಣಿರೇ ನಮ್ಮ' ಕೀರ್ತನೆಗಳು ಬಹಳ ಪ್ರಸಿದ್ಧವಾದವು. ತ್ಯಾಗರಾಜರ ಕೃತಿಗಳಲ್ಲಿ ಬಾಲಕೃಷ್ಣನ ವರ್ಣನೆ ಗಳೇ ಕಡಿಮೆ. ಒಂದು ಕೀರ್ತನೆಯಲ್ಲಿ ಮಾತ್ರ 'ಚಿನ್ನಿ ಕೃಷ್ಣನ' ದಿವ್ಯರೂಪವನು ವರ್ಣಿಸಿದ್ದಾರೆ.

ವೆನ್ನ ಮ್ರಾಗಡಲ ವೇಡ್ಕ ಮ್ರಾರಗನು
ಕನ್ನ ಪಿನ್ನ ವಾಂಡ್ಲ ಕಡುಪುನಿಂಚಿ
ತಿನ್ನಗಾ ವೆಲಯು ದಿವ್ಯರೂಪಮು

ತ್ಯಾಗರಾಜರ ಕೃತಿಗಳಲ್ಲಿ ಮಾಧುರ್ಯ ಭಕ್ತಿ ಯಿದ್ದರೂ ಅವರದು ಪತಿವ್ರತಾಭಕ್ತಿ, ಗೋಪಿಕಾ ಭಕ್ತಿ ಪದ್ಧತಿಯಲ್ಲ.

'ಪಂಕಜ ನಯನ ! ನಾ ಕುಂಕುಮ ನೀವೆ
ಕಮನೀಯಂಬಗು ಪಾನ್ಪು ಗಾವಿಂಚಿತಿ ನಂದು
ರಮಿಯಿಂಪಕನೆ ನನ್ನು ರಚ್ಚ ಸೇಸೇವು'

(ರಮಣೀಯವಾದ, ಕಮನೀಯವಾದ ಹಾಸಿಗೆ ಸಿದ್ಧಪಡಿಸಿದ್ದೇನೆ. ಅಲ್ಲಿ ನನ್ನ ಸಂತೋಷ ಪಡಿಸುವುದಲ್ಲದೆ ರಂಪಮಾಡುವುದು ಅಪಹಾಸ್ಯ ವಲ್ಲವೇ)

ದಾಸರಿಗೂ ರಾಮಭಕ್ತಿ ಉಂಟು. ಇವರಿಬ್ಬರೂ ರಾಮಾವತಾರವನ್ನು ಪೂರ್ಣಾವತಾರವಾಗಿ ನೆನೆದಿದ್ದಾರೆ.

'ರಾಮ ನಾಮವ ನುಡಿನುಡಿ'
'ಪಶುಪತಿಗೆ ಪ್ರಿಯವಾದ ಮಂತ್ರ'
'ರಾಮ ನಾಮ ಜಪಿಸೋ'
'ರಾಮ ನಾಮ ರತ್ನಹಾರ ದೊರಕಿತು'

ಹಾಡುಗಳಲ್ಲಿ ದಾಸರ ರಾಮಭಕ್ತಿ ನೋಡ ಬಹುದು. 'ಅಲ್ಲಿ ನೋಡಲು ರಾಮ, ಇಲ್ಲಿ ನೋಡಲು ರಾಮ' ಕೀರ್ತನೆಯಲ್ಲಿ ರಾಮ ರಾವಣ ಸಂಗ್ರಾಮ ಸಮಯದಲ್ಲಿ ರಾಕ್ಷಸರ ಧಾಳಿಯಿಂದ ಕಪಿಸೇನೆ ಬೆದರಿ ಹೋದಾಗ ನರ ನಾಗಿಯಿರಬಾರದೆಂದು ರಾಮನು ವಿಶ್ವರೂಪ ನಾದನಂತೆ. ತ್ಯಾಗರಾಜರು ರಾಮಾವತಾರ ವನ್ನು ತತ್ತ್ವಮೂರ್ತಿಯಾಗಿ ಧ್ಯಾನಮಾಡಿದ್ದಾರೆ.

'ಅವಿಕೃತ, ಅಖಂಡರೂಪ, ಅದ್ವೈತಂ ಅನಾದಿ ಅದ್ಯಂತರಹಿತ' ವಿಶೇಷಣಗಳು ಇದಕ್ಕೆ ಸಾಕ್ಷಿ. 'ಪದಿವೇಷಮುಲಲೋ ರಾಮವೇಷಮು ಬಹು ಬಾಗು'(ಹತ್ತು ವೇಷಗಳಲ್ಲಿ ಅಂದರೆ ದಶಾವತಾರ ಗಳಲ್ಲಿ ರಾಮವೇಷ ಶ್ರೇಷ್ಠವಾಗಿದೆ) ಎನ್ನುವುದು ತ್ಯಾಗರಾಜಸ್ವಾಮಿಯವರ ನಿರ್ಣಯ.

ಇವರಿಬ್ಬರೂ ತಮ್ಮ ಕೀರ್ತನೆಗಳಲ್ಲಿ ಅರಸ ಸೇವೆ, ಧನವಂತರನ್ನು ಆಶ್ರಯಿಸುವುದನ್ನು ಖಂಡಿಸಿದ್ದಾರೆ-

ದಾಸರು :

'ಇರುಳು ಹಗಲು ನರಹರಿಯನು ಕುತಿಸದೆ
ನರ ಪಶುಗಳ ಕೊಂಡಾಡುತಿ'
'ಕಾಯಲಾರೆನು ಕೃಷ್ಣ ಕಂಡವರ ಬಾಗಿಲನು'
'ಪರರ ತುತಿಸಿ ನಾಲಿಗೆ ಬರಡಾಯಿತಲ್ಲ'

ತ್ಯಾಗರಾಜರು :

ಕೊಂಚೆಪು ನರುಲನು ನುತಿಂಚ ನಾವಲ್ಲನು
ಗಾದು
(ಹೀನರನ್ನು ಹೊಗಳುವುದು ನನಗೆ
ಸಾಧ್ಯವಿಲ್ಲ)
ಧನಮದಮುನನುಂಡು ಜನುಲನು
ನೇನು ಯಾಚನ ಸೇಯಗ ಲೇನುರಾ

ಕಲಿಯುಗನಿಂದನೆ, ಭಕ್ತರು ಪಡುವ ಬಾಧೆಗಳನ್ನು ಇವರಿಬ್ಬರೂ ಹಾಡಿದ್ದಾರೆ ಉದಾ :

ದಾಸರು :

'ಕಲಿಯುಗದ ಮಹಿಮೆಯು ಕಾಣಬಂತೀಗ'
'ಸತ್ಯವಂತರಗಿದು ಕಾಲವಲ್ಲ'

ತ್ಯಾಗರಾಜರು :

ಕಾಲವಿಶೇಷಮೋ ಮೋಸಮುಗತಿಯೋ
ಸನ್ಮಾರ್ಗಂಬುಲ ಕೀಲುವದಲೆ

ಕಲಿಕಾಲದಲ್ಲಿ ದೇವರು ಪ್ರತ್ಯಕ್ಷವಾಗಿ ದುಷ್ಟರನ್ನು ಶಿಕ್ಷಿಸಬೇಕೆಂದು ಅವರ ಕೋರಿಕೆ.

ಏದಿ ನೀ ಬಾಹುಪರಾಕ್ರಮಮೆನ್ನಾಳ್ಳ
ಕೆನ್ನಾಳ್ಳು
ಆದಿದೇವ ನಿಜದಾಸುಲಕು ಗನನಾಸ
ಯುಂಡಗಾ ಕರಿವರದಾ
ಕರಮುನ ಮೆರಸೇ ಶರಚಾಪಮು ಆಕಲಿ
ಗೊನಗಲೇದಾ
ಮುರಖರಶೋಣಿತ ಪಾನಮು ಬಹುದಿನ
ಮುಲುಗಾಲೇದಾ

'ನಿನ್ನ ಭುಜಬಲಪರಾಕ್ರಮವೇನಾಯಿತು ? ಕೈ ಯಲ್ಲಿ ಮೆರೆಯುವ ಶರಚಾಪಗಳಿಗೆ ಹಸಿವಿಲ್ಲವೋ, ಮುರ, ಖರಾದಿ ರಾಕ್ಷಸರ ರಕ್ತಪಾನವು ಮಾಡಿ ಕಾಲಕಳೆದು ಹೋಯಿತಲ್ಲಾ'.

ಗುರು ಸ್ತುತಿ ಇವರಿಬ್ಬರ ಕೃತಿಗಳಲ್ಲಿ ಸಮಾನ ವಾಗಿದೆ. ಗುರುಗಳಲ್ಲಿ ವಿದ್ಯಾಗುರುಗಳು, ದೀಕ್ಷೆ ಕೊಟ್ಟವರು, ಮಠ ಗುರುಗಳು ಸೇರುತ್ತಾರೆ. ದಾಸರು ವ್ಯಾಸರಾಯರನ್ನು ಬಹಳಷ್ಟು ಪ್ರಶಂಸೆ ಮಾಡಿದ್ದಾರೆ.

ದಾಸರು :

ಗುರುರಾಯರ ನಂಬಿರೋ-ಮಾರುತಿಯೆಂಬ
ಗುರುರಾಯರ ನಂಬಿರೋ

ತ್ಯಾಗರಾಜರು :

ರಂಜಿಲ್ಲು ವೀಣ ಕಲ್ಗು ಗುರುರಾಯ
ಶ್ರೀ ನಾರದ ನಾದ ಸರಸೀರುಹಭೃಂಗ
ವರ ನಾರದನಾರಾಯಣಾ

ಮತ್ತು ಗುರುವಿನ ಮಹಿಮೆಯನ್ನು ಇವರಿಬ್ಬರೂ ಹೇಳಿದ್ದಾರೆ.

'ಗುರುವಿನ ಗುಲಾಮನಾಗುವ ತನಕ
ದೊರೆಯ ದಣ್ಣ ಮುಕುತಿ'
'ರಾಮನಾಮವ ನುಡಿನುಡಿ
ಗುರುಗಳ ಚರಣವ ಹಿಡಿ ಹಿಡಿ'
'ಹರಿಗುರುಗಳಿಗೆರಗದೆ
ಹರಿಭಕ್ತಿ ಒದಗುವದೆ'

ತ್ಯಾಗರಾಜರು :

ಗುರುವೇ ಭ್ರಮರಮು
ಗುರುವೇ ಭಾಸ್ಕರುಡು

ಕೀಟವನ್ನು ಸುತ್ತಿ ಭ್ರಮರ ಅದನ್ನು ಭ್ರಮರಮಾಡುತ್ತದೆ. ಅದೇ ಪ್ರಕಾರ ಶಿಷ್ಯನಿಗೆ ಗುರುಗಳು ಉಪದೇಶಮಾಡಿ ತನ್ನಂತೆಯೇ ವಿಶಿಷ್ಟ ವ್ಯಕ್ತಿಯನ್ನಾಗಿ ಮಾಡುತ್ತಾರೆ. ಭಾಸ್ಕರನಾಗಿ ಅಜ್ಞಾನ ಇರುಳನ್ನು ದೂರಮಾಡುತ್ತಾರೆ.

ಇವರಿಬ್ಬರಿಗೂ ಪ್ರಿಯವಾದದ್ದು ತುಲಸೀಪೂಜೆ.

ದಾಸರು :

'ಕಲ್ಯಾಣಂ ತುಲಸೀಕಲ್ಯಾಣಂ'
'ವೃಂದಾವನ ದೇವಿ ನಮೋನಮೋ'
'ಎಲ್ಲಿ ಶ್ರೀ ತುಲಸಿಯ ವನವು
ಅಲ್ಲಿ ಒಪ್ಪುವರು ಸಿರಿರಾಯರು'

ತ್ಯಾಗರಾಜರು :

'ತುಲಸೀ ಜಗಜ್ಜನನೀ ದುರಿತಾಪಹಾರಿಣೀ'
'ಅಮ್ಮ ರಾವಮ್ಮ ತುಲಸಮ್ಮ ನನು
ಪಾಲಿಂಪು'
'ತುಲಸೀದಳಮುಲಚೇ ಸಂತೋಷಮುಗಾ
ಪೂಜಿಂತು'
'ತುಲಸಮ್ಮಮಾಯಿಂಟ ನೆಲಕೊನವಮ್ಮ ಶ್ರೀ
ಈ ಮಹಿನಿ ನೀ ಸಮಾನಮೆವರಮ್ಮ'
'ತುಲಸೀ ಬಿಲ್ವಮಲ್ಲಿಕಾದಿ ಜಲಜಮುಲ
ಗೈಕೊನವೆ'

ಗ್ರಹಬಲವನ್ನು ಕುರಿತು ಇವರಿಬ್ಬರ ಕೀರ್ತನೆಗಳನ್ನು ನೋಡಿ,

ಬಲವು ಬಲವೇ ನಿನ್ನ ಬಲವಲ್ಲದೆ-ಮಿಕ್ಕ
ಬಲಗಳುಂಟೆ ಬಣಗು ಗ್ರಹಗಳಿಂದ
ಹರಿ ನಿನ್ನ ಕೃಪೆಯೆನಗೆ ಚಂದ್ರತಾರಾಬಲವು
ಹರಿ ನಿನ್ನ ಕರುಣವೇ ರವಿಯ ಬಲವು
ಹರಿ ನಿನ್ನ ಮೋಹವೇ ಎನಗೆ ಗುರುಭೃಗು ಬಲವು
ಹರಿ ನಿನ್ನ ಬಲುಮೆಯೇ ಶನಿಯ ಬಲವು

ತ್ಯಾಗರಾಜರು :

ನವಗ್ರಹಬಲಮೇಮಿ ಶ್ರೀರಾಮಾನುಗ್ರಹ ಬಲಮೇ ಬಲಮುಟ
ಗ್ರಹಬಲಮೇಮಿ ತೇಜೋಮಯ ವಿ
ಗ್ರಹಮುನು ಧ್ಯಾನಿಂಚೇವಾರಿಕಿ

ಇವರಿಬ್ಬರೂ ಭಜನೆಪದ್ಧತಿಯಲ್ಲಿ ಕೀರ್ತನೆಗಳು ಬರೆದವರು. ಆದ್ದರಿಂದ ಇವರ ಕೃತಿಗಳಲ್ಲಿ ಕವಿತಾ ಗುಣಗಳನ್ನು ಎತ್ತಿ ತೋರಿಸುವುದು ಉಚಿತವಲ್ಲ ಆದರೂ ಪುರಂದರದಾಸರ ರಚನೆಯಲ್ಲಿ ಕಾಣುವಂತಹ ವ್ಯಂಗ್ಯವೈಭವ, ವಸ್ತುವೈವಿಧ್ಯ ಸರಳವಾದ ಸಂಭಾಷಣಾಶೈಲಿ ತ್ಯಾಗರಾಜರಲ್ಲಿ ಕಾಣುವುದಿಲ್ಲ. ಇದೇರೀತಿ ತ್ಯಾಗರಾಜರು ಸಂಗೀತಕ್ಕೆ ಕೊಟ್ಟ ಪ್ರಾಧಾನ್ಯ ದಾಸರು ಕೊಟ್ಟಿಲ್ಲ. ಇದಕ್ಕೆ ಅವರವರ ಕಾಲಗತಿಗಳೇ ಕಾರಣ. ಆದರೂ ಸಂಗೀತ ಪ್ರಾಧಾನ್ಯವನ್ನು ಇಬ್ಬರು ಹೇಳಿದ್ದಾರೆ.

ತಾಳ ಬೇಕು ತಕ್ಕ ಮೇಳ ಬೇಕು
ಶಾಂತ ವೇಳೆ ಬೇಕು ಗಾನವನ್ನು ಕೇಳ ಬೇಕೆಂಬುವರಿಗೆ
ಯತಿಪ್ರಾಸವಿರಬೇಕು ಗತಿಗೆ ನಿಲ್ಲಿಸಬೇಕು
ರತಿಪತಿಪಿತನೊಳು ಅತಿ ಪ್ರೇಮವಿರಬೇಕು
ಗಳಶುದ್ಧವಿರಬೇಕು ತಿಳಿದು ಪೇಳಲುಬೇಕು
ಕಳವಳ ಬಿಡಬೇಕು ಕಳೆಮುಖವಿರಬೇಕು
ಅರಿತವರಿರಬೇಕು ಹರುಷ ಹೆಚ್ಚಲುಬೇಕು
ಪುರಂದರವಿಠಲನೆ ಪರದೈವವೆನಬೇಕು

ಇದೇರೀತಿ 'ಕೇಳನೋ ಹರಿತಾಳನೋ' ಕೀರ್ತನೆಯಲ್ಲಿ ಅನುದಿನವು ಉಂಛವೃತ್ತಿಯಲ್ಲಿ ನಡೆಯುವ ಪದ್ಧತಿಯನ್ನು ವಿವರಿಸಿದ್ದಾರೆ. ತ್ಯಾಗರಾಗರು 'ಸಂಗೀತಜ್ಞಾನಮು ಭಕ್ತಿವಿನಾ ಸನ್ಮಾರ್ಗಮು ಗಲದೇ' ಎಂದು ಪ್ರಶ್ನಿಸುತ್ತಾರೆ.

'ಹರಿ ದಾಸುಲು ವೆಡಲೇ ಮುಚ್ಚಟ-ಆನಂದ ಮಾಯೆ' ಎಂದು ಅನುದಿನವು ತಾವು ಹೋಗುವ ಭಜನಕೂಟವನ್ನು ಸಾಕ್ಷಾತ್ಕಾರ ಮಾಡುತ್ತಾರೆ. ನವವಿಧ ಭಕ್ತಿಗಳಿಗೆ ಲಕ್ಷ್ಯವಾಗಿ ಬಾಳಿದವರು ಪುರಂದರದಾಸರು ತ್ಯಾಗರಾಜರು. ವಾಗ್ಗೇಯಕಾರ ಆಕಾಶದಲ್ಲಿ ಇವರಿಬ್ಬರೂ ಸೂರ್ಯಚಂದ್ರರಂತೆ ಪ್ರಕಾಶಿಸುತ್ತಾರೆ. ★

(34ನೇ ಪುಟದಿಂದ)

ರಿಸುತ್ತಾ, ಗೋಲ್ಕೊಂಡ ರಾಜ್ಯ ತಲುಪುವವರೆಗೂ ರಾಮಭಜನೆಯಲ್ಲೇ ತಲ್ಲೀನರಾಗಿದ್ದರು. ತಾನೀಷಾ ರಾಜಸಭೆಯಲ್ಲಿ ರಾಮದಾಸರನ್ನು ಕರೆಸಿ ನಡೆಸಿದ ವಾಗ್ವಿವಾದದಿಂದ ಆತ ನಿಸ್ವಾರ್ಥಿ ಎಂದರಿತರೂ, ಅವರಿಗೆ ಮನ್ನಣೆ ನೀಡಿದರೆ ಉಳಿದ ಸ್ವಾರ್ಥಿಗಳೂ ಸ್ವಾರ್ಥಕ್ಕೆ ಅದೇರೀತಿ ಮಾಡುವರೆಂದು ಯೋಚಿಸಿ ನೋವುತುಂಬಿದ ಮನಸ್ಸಿನಿಂದಲೇ ಅವರಿಗೆ "ಸರ್ಕಾರಕ್ಕೆ ಸಲ್ಲಿಸಬೇಕಾದ ಹಣವನ್ನು ಒಂದು ವಾರದೊಳಗೆ ಕೊಡಬೇಕು" ಎಂದು ಹೇಳಿ ಅವರನ್ನು ಕಾರಾಗೃಹದಲ್ಲಿಡುವಂತೆ ಆಜ್ಞಾಪಿಸಿದರು. ಸೆರೆಮನೆಯಲ್ಲಿ ಅನೇಕ ಹಿಂಸೆಗಳನ್ನು ಅನುಭವಿಸುತ್ತಾ ಇದ್ದರೂ ಸದಾ ಕಾಲವೂ ತದೇಕಚಿತ್ತರಾಗಿ ಶ್ರೀರಾಮನ ಭಜನೆ, ಧ್ಯಾನದಲ್ಲೇ ಕಾಲಕಳೆಯುತ್ತಿದ್ದರು. ಎಷ್ಟುದಿನಗಳಾದರೂ ರಾಮನ ಕರುಣಾವರುಷ ತಮ್ಮ ಮೇಲೆ ಸುರಿಯದಿದ್ದುದಕ್ಕೆ ಬೇಸರಪಟ್ಟು, ಇಂತಹ ಜೀವಿತದಿಂದ ಏನು ಸಾರ್ಥಕ? ಬೆಳಗಾಗುವುದರೊಳಗೆ ರಾಮನ ದಯೆ ಯುಂಟಾಗದಿದ್ದರೆ ಆತ್ಮಹತ್ಯೆಯಿಂದ ಬಂಧನ ವಿಮುಕ್ತಿ ಹೊಂದಬೇಕೆಂದು ಯೋಚಿಸಿ ವಿಷದ ಬಟ್ಟಲನ್ನು ಬಳಿಯಲ್ಲಿಟ್ಟುಕೊಂಡು ಇಷ್ಟದೈವವನ್ನು ಹೊಗಳಿ ಆಯಾಸದಿಂದ ಮಲಗಿದರು. ಶ್ರೀರಾಮನು ಭಕ್ತನ ಪರೀಕ್ಷೆ ಸಾಕೆಂದು ಯೋಚಿಸಿ ರಾಮಲಕ್ಷ್ಮಣರೀರ್ವರೂ ಸೇವಕರ ವೇಷದಿಂದ ಬಂದು ತಾನೀಷಾನಿಗೆ ರಾಮದಾಸರು ಸಲ್ಲಿಸಬೇಕಾದ ಹಣವನ್ನು ಸಲ್ಲಿಸಿ ರಶೀತಿಪಡೆದು ಮಾಯವಾದರು. ಇತ್ತ ರಾಮದಾಸರಿಗೆ ತಾನೀಷಾನಿಂದ ರಸೀದಿಯನ್ನು ಪಡೆದ ರಾಮಲಕ್ಷ್ಮಣರು ಬಂದು ತಾನೀಷಾವೇಷದಿಂದ ಕಾಣಿಸಿಕೊಂಡು ಆ ರಸೀದಿಯನ್ನು ತಲ್ಪಿಸಿ ಹೊರಹೋದಂತೆ ಭಾಸವಾಯಿತು.

ಆ ರಾತ್ರಿ ನಡೆದ ಘಟನೆಯಿಂದ ತಾನೀಷಾನಿಗೆ ರಾಮದಾಸರ ಮೇಲೆ ಗೌರವಭಾವ ಮೂಡಿ ಅವರನ್ನು ಬಂಧನದಿಂದ ಬಿಡುಗಡೆಗೊಳಿಸಿ ಅತ್ಯಾದರದಿಂದ ರಾಜಾಸ್ಥಾನಕ್ಕೆ ಕರೆಸಿ, ಕ್ಷಮಾಪಣೆ ಯಾಚಿಸಿ, ಅಮೂಲ್ಯ ವಸ್ತ್ರಭೂಷಣಗಳನ್ನು ಉಡುಗೊರೆಯಾಗಿ ಕೊಟ್ಟು, ಗೌರವಿಸಿದನು. ಭದ್ರಾಚಲಗ್ರಾಮವನ್ನೇ ಬಳುವಳಿಯಾಗಿ ಕೊಟ್ಟು, ಇಷ್ಟದೈವದ ಪೂಜೆಯನ್ನು ಇಚ್ಛಾನುಸಾರ ಮಾಡುವುದಕ್ಕೆ ಅನುಕೂಲಮಾಡಿಕೊಟ್ಟನು. ರಾಜಗೌರವದೊಡನೆ ಭದ್ರಾಚಲ ಸೇರಿದ ಇವರಿಗೆ ಗ್ರಾಮಸ್ಥರೆಲ್ಲಾ ಗೌರವದಿಂದ ಬರಮಾಡಿಕೊಂಡರು. ನಮ್ಮ ಕಥಾನಾಯಕರು ನಿರಾತಂಕವಾಗಿ ಬಳುವಳಿಯಾಗಿ ಕೊಟ್ಟ ಗ್ರಾಮದಿಂದುತ್ಪತ್ತಿಯಾದ ದ್ರವ್ಯವನ್ನು ಆ ಸ್ವಾಮಿಯ ಸೇವೆಗೇ ವಿನಿಯೋಗಿಸಿ ದೇಹತ್ಯಾಗಮಾಡಿ ಮುಕ್ತರಾದರು.

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿ ಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟ್ ಅನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಬರೆಯಿರಿ:

**ಆಡಳಿತ ನಿರ್ವಹಣಾಧಿಕಾರಿ**

**ತಿ. ತಿ. ದೇ. ತಿರುಪತಿ.**

(32ನೇ ಪುಟದಿಂದ)

ದೇವರು ಮಾಡಿದಂತೆ ಆಗಲಿ ಎಂಬುದು ಅವರ ನಿಲುಮೆಯಾಗಿತ್ತು. ಅವರು ಎಲ್ಲ ಕಡೆಯಲ್ಲೂ ಪರಮಾತ್ಮನನ್ನು ಕಂಡರು. ವಿಶ್ವವನ್ನೆಲ್ಲ ತುಂಬಿದ ಪರಮಾತ್ಮನು ತಮ್ಮ ಒಳಗೂ ತುಂಬಿದ್ದಾನೆಂಬ ನಾಮಾಮೃತ ಅವರದಾಗಿತ್ತು :

ವಚನದಲ್ಲಿ ನಾಮಾಮೃತ ತುಂಬಿ,
ನಯನದಲ್ಲಿ ನಿಮ್ಮ ಮೂರುತಿ ತುಂಬಿ
ಮನದಲ್ಲಿ ನಿಮ್ಮ ನೆನೆವು ತುಂಬಿ, ಕಿವಿಯಲ್ಲಿ
ನಿಮ್ಮ ಕೀರುತಿ ತುಂಬಿ,
ಕೂಡಲ ಸಂಗಮದೇವಾ, ನಿಮ್ಮ ಚರಣ
ಕಮಲದಲ್ಲಿ ಅನು ತುಂಬಿ

ಹೀಗೆ ಬಸವಣ್ಣನವರು ತಮ್ಮ ನುಡಿಯಲ್ಲಿ ಪರಮಾತ್ಮನ ನಾಮವು, ಕಣ್ಣಿನಲ್ಲಿ ಆತನ ಮೂರ್ತಿಯು, ಮನದಲ್ಲಿ ಆತನ ಸ್ಮರಣೆಯು, ಕಿವಿಯಲ್ಲಿ ಆತನ ಕೀರ್ತಿಯು ತುಂಬಿದೆ, ಪರಮಾತ್ಮನ ಚರಣವೆಂಬ ಕಮಲದಲ್ಲಿ ತಾನು ಭ್ರಮರನಾಗಿರುವೆ. ಎಂದಿದ್ದಾರೆ.

ಒಟ್ಟಿನಲ್ಲಿ ಅವರ ವಚನಗಳು ಬರೀ ನಟನೆಯಲ್ಲ, ಅವು ಅಂತರಂಗಸ್ಪರಿತ ನೈಸರ್ಗಿಕ ಭಾವಗಳು. ಅವರು ಬೋಧಿಸಿದ ತತ್ತ್ವಗಳೆಲ್ಲಾ ಕಾರ್ಯರೂಪಕ್ಕೆ ತರುವಂಥದಾದ್ದು. "ಕಾಯಕವೇ ಕೈಲಾಸ" ವೆಂದು ಸಾರಿದ ಬಸವಣ್ಣನವರಿಗೆ ಜೊಳ್ಳು ಮಾತುಗಳ ಮೇಲೆ ತಿರಸ್ಕಾರವಿತ್ತು. ಅವರ ವಚನಗಳು ಉತ್ತಮ ಅನುಭವ, ಭಕ್ತಿ, ತತ್ತ್ವ, ಧರ್ಮಗಳಿಂದ ಕೂಡಿ ಪ್ರಸನ್ನ ಗಂಭೀರವಾಗಿಯೂ, ಲಲಿತವಾಗಿಯೂ, ಇದ್ದು ಹೃದಯಸ್ಪರ್ಶಿಯಾಗಿವೆ ಅವು ವೀರಶೈವ ಧರ್ಮದ ಹಾಗೂ ವಿಶ್ವಧರ್ಮದ ಕನ್ನಡಿಯಾಗಿದ್ದು ಕನ್ನಡ ಸಾಹಿತ್ಯಕ್ಕೆ ವಿಶೇಷ ಕಾಂತಿಯನ್ನು ಉಂಟುಮಾಡಿವೆ.

ಬಸವೇಶ್ವರರಿಗೂ ಬುದ್ಧ ಭಗವಾನರಿಗೂ ಹಲವು ಕಡೆಗಳಲ್ಲಿ ಸಾಮ್ಯವಿದೆ. ಮೂಢನಂಬಿಕೆಗಳ ವಿರುದ್ಧವಾಗಿ ಈ ಇಬ್ಬರು ಮಹಾತ್ಮರು ಕತ್ತಿ ಎತ್ತಿದರು; ನೀತಿ ಪ್ರಧಾನವಾದ ಧರ್ಮವನ್ನು ಪ್ರಸಾರಗೊಳಿಸಿದರು; ಇಬ್ಬರೂ ಮಾನವರೆಲ್ಲರೂ ಸಹೋದರರೆಂಬುದನ್ನು ತಿಳಿಯಹೇಳಿದರು; ಈರ್ವರೂ ತಮ್ಮ ಧರ್ಮಗಳನ್ನು ಭದ್ರ ನ್ಯಾವಸ್ಥೆಯ ಅಡಿಗಲ್ಲಿನಲ್ಲಿ ನಿಲ್ಲಿಸಿದರು; ಇಬ್ಬರೂ ಜನಸಾಮಾನ್ಯರ ಸರಳ ಭಾಷೆಯಲ್ಲಿ ತತ್ತ್ವ ಪ್ರಚಾರ ಮಾಡಿದರು; ಅವರಿಬ್ಬರೂ ಸಮಾಜದ ಓರೆ ಕೋರೆಗಳನ್ನು ಸರಿಪಡಿಸಿ ಸುಧಾರಣೆಗೆ ಪ್ರಯತ್ನಪಟ್ಟರು.

ಬಸವಣ್ಣನವರು ದೇವಮಾನವರಾಗಿ ಬಾಳಿದರು. ಎಲ್ಲರಿಗೂ ದೇವಮಾನವರಾಗುವ ಹಾದಿಯನ್ನು ತೋರಿಸಿ ಕೊಟ್ಟರು. ಎಂಟುನೂರು ವರ್ಷಗಳು ಉರುಳಿದರೂ ಅವರು ಬಿಟ್ಟ ಬೆಳಕು ಪ್ರಕಾಶಮಾನವಾಗಿವಾಗಿಯೇ ಉಳಿದಿದೆ. ಅಂತಹ ಜೀವಜ್ಯೋತಿಯಾಗಿದ್ದಾರೆ, ಭಕ್ತಿಭಂಡಾರಿ ಬಸವೇಶ್ವರರು. ಇವರು ನಿಜವಾಗಿಯೂ ಕರ್ನಾಟಕದ ಧಾರ್ಮಿಕ ಹಾಗೂ ಸಾಮಾಜಿಕ ರಂಗದಲ್ಲಿ ಒಂದು ಹೊಸ ಯುಗದ ಪ್ರವರ್ತಕರು; ಕ್ರಾಂತಿಕಾರಿಯಾದ ಬಸವೇಶ್ವರರನ್ನು ಕರ್ನಾಟಕದ ಮಾರ್ಟಿನ್ ಲೂಥರ್ ಎಂದದ್ದು ಸುಳ್ಳಲ್ಲ.

★

(24 ನೇ ಪುಟದಿಂದ )

ಬಟ್ಲಾಗ ಹಾಲ್ಹಾಕಿ ತೊಟ್ಲಾಗ ಇಟ್ಟೇನ
ಕುಡಿ ಕುಡಿ ಅಂದರ ಕಾಡಿ ಕಾಡಿ ಅಳತಾನ
ಹಾಲ ಬೇಡಿ ಹರದಾನ, ನೀರ ಬೇಡಿ ನಿಂತಾನ
ಮಸರ ಬೇಡಿ ಕೆಸರ ತುಳದಾನ। ಕಂದನ
ಕುಸುಲಾದ ಗೆಜ್ಜಿ ಕೆಸರಾಗ

ಎನ್ನುವ ಅವಳ ಈ ಮಾತುಗಳಲ್ಲಿ ಮಾತೃ ಹೃದಯದ ಹರ್ಷವು ಹೊನಲಾಗಿಯೇ ಹರಿದುದನ್ನು ಕಾಣಬಹುದು.

ಕಂದನ ಆಳ್ವಿಕೆಯಲ್ಲಿ ಒಂದರೆಕ್ಷಣ ಸ್ವರ್ಗ ಕಂಡ ಅವಳು ಮನೆಗೆಲಸವನ್ನು ಮರೆಯುತ್ತಾಳೆ. ಹುಣ್ಣಿಮೆಗೆ ಹುಗ್ಗಿ ಮಾಡಲು ಗೋಧಿ ಕುಟ್ಟುವ ನೆನಪಾಗಿ ಒರಳಿನ ಮುಂದೆ ಕುಳಿತು ಕುಟ್ಟುತ್ತ, ತನ್ನ ಮನೆಮಂದಿಯ ಸ್ವಭಾವ, ಅವರು ತನ್ನನ್ನು ನಡೆಸಿಕೊಳ್ಳುವ ರೀತಿಯನ್ನು ಹಾಡಿನ ರೂಪದಲ್ಲಿ ಹೇಳುತ್ತಾಳೆ.

ಹುಗ್ಗೀಯ ಕುಟ್ಟಂದ್ರ ಹಿಗ್ಗೀತ ನನಜೀವ
ಹುಗ್ಗಿ ನೀಡ್ಯಾಳ ಉಗರಷ್ಟ। ತಂಗೆಮ್ಮ
ತುಪ್ಪ ನೀಡ್ಯಾಳ ಶಿವಬಲ್ಲ

ತನ್ನ ಅತ್ತೆಯ ತಾರತಮ್ಯ ಸ್ವಭಾವದ ಸೂಕ್ಷ್ಮ ಪರಿಚಯವನ್ನು ಅವಳು ಮಾಡಿಸುತ್ತಾಳೆ.

ಹೀಗೆ ಜನಪದದಲ್ಲಿ ನಾರಿಯ ಬೆಳಕಿನಿಂದಲೇ ಮಾನವನ ಬಾಳು ಬಂಗಾರವಾಯ್ತು, ತನ್ನಂತೆ ತನ್ನ ಮಕ್ಕಳೂ ಸರ್ವಪ್ರೇಮಿಗಳಾಗಿ ಬಾಳಬೇಕೆಂಬುದೇ ಅವಳ ಹಿರಿಯಾಸೆ, ಅದಕ್ಕೆಂದೇ ಅವಳು ಎಂತಹ ದುಃಖದ ಪರಮಾವಧಿಯಲ್ಲಿದ್ದರೂ ತನ್ನ ಬಂಧು ಬಳಗದವರನ್ನು ಮರೆಯದೇ ತನ್ನ ತೌರಿನ ಬಳ್ಳಿ ಸೊಂಪಾಗಿ ಹಬ್ಬಲಿ ಎಂದು ಹರಸುತ್ತಾಳೆ.

ಹಳ್ಳಿ ಊರ ತುಂಬ ಹಂದರ ಹಬ್ಬೈತಿ
ಕಳ್ಳ ಬಳ್ಳಿಯ ಬಳಗವು। ಮನಿಮನಿಗೆ
ಹೂ ಬಳ್ಳಿ ಹಂಗ ಹರದೈತಿ

ಎಂದು ತನ್ನ ಬಂಧುತ್ವವನ್ನು ಹೆಮ್ಮೆಯಿಂದ ಹೇಳಿದ್ದಾಳೆ. ತನ್ನ ಮಗಳೂ ತನ್ನಂತೆ ಬಾಳಿ ಬದುಕಿ ಸಮಾಜದಲ್ಲಿ ಹುಟ್ಟಿದ (ಮನೆಗೂ ಕೊಟ್ಟ ಮನೆಗೂ ಹೆಸರು ತರಲೆಂಬ ಮಹದಾಶೆಯೇ ಅವಳದಾಗಿದೆ.

ಚಿಕ್ಕ ಮಗಳು ಮೊದಲ ಬಾರಿಗೆ ಗಂಡನ ಮನೆಗೆ, 'ಮದುಮಗಳಾಗಿ, ಆ ಮನೆಯ ಸೊಸೆಯಾಗಿ, ಗೃಹಲಕ್ಷ್ಮಿಯಾಗಿ ಆ ಮನೆಗೆ ನಂದಾದೀವಿಗೆಯಾಗಿ ಹೋಗುತ್ತಿರುವ ಅವಳಿಗೆ ಕಿವಿಮಾತೊಂದು ಹೇಳಲು ಮರೆಯುವದಿಲ್ಲ.

ಸತಿ ಪತಿ ಇದ್ದರ ಹಿತವಂತರಿರಬೇಕ
ಕುಂಬಾರದುಳುಹಂಗ ಸಂಸಾರ। ಸಾಗಿದರ
ಮುಂದೈತಿ ತಂಗಿ ಕೈಲಾಸ

—ಎಂದು ಅತ್ತೆಯ ಮನೆಯಲ್ಲಿ ಹೆಣ್ಣು ಸರಿಯಾಗಿ ಜೀವನ ಸಾಗಿಸಿದಲ್ಲಿ, ಅದಕ್ಕಿಂತ ಬೇರೆ ಸ್ವರ್ಗ ಅವಳಿಗೆ ಇನ್ನೊಂದಿಲ್ಲ. ಆಗ ಅವಳಿಗೆ ಮನೆಯು ನಂದನವನವಾಗುತ್ತದೆ ಎನ್ನುತ್ತಾಳೆ. ★

( 4ನೇ ಪುಟದಿಂದ )

ಗಳಿಗೆ ಅವಕಾಶನೀಡಿದೆ. ಆದಿಶಂಕರರು ಹೇಳಿದ 'ಶಿವಃ ಶಕ್ತ್ಯಾಯುಕ್ತೋ ಯದಿ ಭವತಿ ಶಕ್ತಃ ಪ್ರಭವಿತುಂ' ಎನ್ನುವುದಕ್ಕೆ ಲಕ್ಷ್ಯಭೂತವಾಗಿದೆ.

ಎಂದರೆ ಈ ವಿಶಾಲ ಚರಾಚರ ಪ್ರವೃತ್ತಿಯೆಲ್ಲ ಪರಮಪುರುಷ ಪರಾಕೃತಿಗಳ ಲೀಲಾಜಾಲವೆನ್ನುವುದು. ಯಾವ ಹೆಸರಿನಿಂದ ಕರೆದರೂ ಆ ಸುಷುಪ್ತ ಪರಮಪುರುಷಹೃದಯಾಂತರಾಳದಲ್ಲಿ ಅನಂತ ಚೈತನ್ಯ ಅತಿ ಗೋಪ್ಯವಾಗಿದ್ದು ತತ್ಸಂಕಲ್ಪ ಮಂತ್ರದಲ್ಲಿ ಪ್ರಬುದ್ಧವಾಗಿ ಪ್ರಕೃತಿರೂಪಧಾರಣೆ ಹೊಂದಿ ವಿಶಾಲಸೃಷ್ಟಿಗೆ ಕಾರಣವಾಗುತ್ತದೆ.

ಇದು ಪರಮಪುರುಷನಾದ ಶ್ರೀ ವೆಂಕಟೇಶ್ವರಸ್ವಾಮಿಯ ಬ್ರಹ್ಮೋತ್ಸವವೂ, ಪರಾತ್ಪರಿಯಾದ ಅನಂತಚೈತನ್ಯ ಶಕ್ತಿಗೆ ನವರಾತ್ರಿ ಉತ್ಸವವಾಗಿಯೂ ಆಚರಿಸಿ ನಾವು ತೃಪ್ತಿಪಡಲು ಏರ್ಪಾಡಾಗಿರುವ ಮಹತ್ತರ ಸಮಯ. ಮನುಷ್ಯ ಮನೋಮಾಲಿನ್ಯವನ್ನು ದೂರಗೊಳಿಸಿಕೊಂಡು ದೈವೀ ಸಂಪತ್ತನ್ನು ಸಾಧಿಸಲು ದೀಕ್ಷೆ ಹೊಂದುವ ಸಮಯ ಹಾಗಾಗಿ ನನ್ನದು, ತನ್ನದು ಎಂಬ ವಾದಗಳಿಗೆ ಅತೀತವಾಗಿ ತಿರುಮಲೆಯ ಶಿಖರಗಳಿಗೆ ಆಗಮಿಸಿರುವ ಪುಂಜೀಭೂತ ಅನಂತ ಚೈತನ್ಯವನ್ನು ಸೇವಿಸೋಣ. ಜ್ಞಾನ ಭಕ್ತಿಗಂಗೆಯಲ್ಲಿ ಮುಳುಗಿ ನಮ್ಮ ಕಲಿದೋಷಗಳನ್ನು ಕಳೆದುಕೊಳ್ಳೋಣ. ★

# ವಾರ್ತಾಲಹರಿ

## ಶ್ರೀ ವೆಂಕಟೇಶ್ವರಸ್ವಾಮಿ ಮಹಾಪ್ರಸಾದ

ತಿರುಮಲೆಯ ಶ್ರೀ ವೆಂಕಟೇಶ್ವರ ಸ್ವಾಮಿಗೆ ಕಾಣಿಕೆಯಾಗಿ ಹತ್ತು ರೂ. ಹಾಗೂ ಮೇಲ್ಪಟ್ಟ ಮೊತ್ತವನ್ನು ಕಳುಹಿಸುವ ಎಲ್ಲ ಭಕ್ತರಿಗೂ ಸ್ವಾಮಿಯ ಮಹಾಪ್ರಸಾದದ ಪೊಟ್ಟಣವನ್ನು ಇನ್ನುಮುಂದೆ ಕಳುಹಿಸಲಾಗುವದೆಂದು ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿಯವರು ತಿಳಿಸಿದ್ದಾರೆ.

ಈ ಬಗ್ಗೆ ಸಾರ್ವಜನಿಕರಿಂದ ಆಗಾಗ್ಗೆ ಸಲಹೆಗಳು ಬರುತ್ತಿದ್ದುದನ್ನು ಗಮನದಲ್ಲಿಟ್ಟುಕೊಂಡು ಈ ನಿರ್ಣಯವನ್ನು ಕೈಗೊಳ್ಳಲಾಗಿದೆ ಎಂದು ಅವರು ತಿಳಿಸಿದರು. ಈ ಮೊದಲಿಗೆ 50 ರೂ. ಹಾಗೂ ಮೇಲ್ಪಟ್ಟ ಮೊತ್ತವನ್ನು ಕಳುಹಿಸಿದ ಭಕ್ತರಿಗೆ ಮಾತ್ರ ಮಹಾಪ್ರಸಾದದ ಒಂದೊಂದು ಪೊಟ್ಟಣವನ್ನು ಕಳುಹಿಸಲಾಗುತ್ತಿತ್ತು ಎಂಬುದನ್ನು ಇಲ್ಲಿ ನೆನೆಯಬಹುದು. ಶ್ರೀ ವೆಂಕಟೇಶ್ವರ ಸ್ವಾಮಿಯ ಕಾಣಿಕೆಯ ಹಣವನ್ನು 'ಕಾರ್ಯ ನಿರ್ವಹಣಾಧಿಕಾರಿ ತಿ. ತಿ. ದೇವಸ್ಥಾನಗಳು ತಿರುಪತಿ' ಎಂಬ ಹೆಸರಿಗೆ ಡಿಮಾಂಡ್ ಡ್ರಾಫ್ಟ್ ಅಥವಾ ಪೋಸ್ಟಲ್ ಆರ್ಡರ್ ರೂಪದಲ್ಲಿ ಕಳುಹಿಸಿಕೊಡಬೇಕೆಂದು ಅವರು ಸಾರ್ವಜನಿಕರನ್ನು ಕೋರಿದ್ದಾರೆ.

## ಹಾಸ್ಟೆಲುಗಳಲ್ಲಿ ಧರ್ಮಪ್ರಸಾರ

ಆಂಧ್ರಪ್ರದೇಶದ ಸಮಾಜ ಅಭಿವೃದ್ಧಿ ವಿದ್ಯಾರ್ಥಿಗೃಹಗಳಲ್ಲಿ ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಕಾರ್ಯಕ್ರಮಗಳನ್ನು ಆರಂಭಿಸಲಾಗುವುದೆಂದು ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿ ರೆಡ್ಡಿಯವರು ಹೇಳಿಕೆ ನೀಡಿದ್ದಾರೆ.

ಶಿಕ್ಷಣವನ್ನು ಹರಡುವ ಪವಿತ್ರ ಕರ್ತವ್ಯವನ್ನು ಕೈಗೊಂಡಿರುವ ತಿ. ತಿ. ದೇವಸ್ಥಾನಗಳು ಸನಾತನ ಧರ್ಮದ ಮೌಲ್ಯಗಳ ಅಭಿವೃದ್ಧಿ ಹಾಗೂ ಪ್ರಸಾರಗಳನ್ನುಂಟು ಮಾಡಲು ವಿದ್ಯಾರ್ಥಿಗೃಹಗಳ ವಿದ್ಯಾರ್ಥಿಗಳಿಗೆ ಉಚಿತವಾಗಿ ಮೌಲಿಕ ಸಾಹಿತ್ಯವನ್ನು ನೀಡಲು ತೀರ್ಮಾನಿಸಿದೆ ಎಂದು ಅವರು ತಿಳಿಸುತ್ತ ಜೊತೆಗೇ ಸಾಮೂಹಿಕ ಭಜನೆ, ಭಕ್ತಿ ಪ್ರಚೋದಕ ಉಪನ್ಯಾಸ, ವಿಚಾರಗೋಷ್ಠಿಗಳನ್ನೂ ಅಲ್ಲಿ ನಡೆಸಲಾಗುವುದು ಎಂದು ನುಡಿದರು. ಹಿಂದೂ ಧರ್ಮ ರಕ್ಷಣ ಸಂಸ್ಥೆ ಈ ವರ್ಷದಲ್ಲಿ ಹಾಕಿಕೊಂಡಿರುವ ಹೊಸ ಕಾರ್ಯಕ್ರಮ ಇದಾಗಿದೆ.

## ವಿಶ್ವಹಿಂದೂ ಪರಿಷತ್ತಿನ ಪ್ರಾಂತೀಯ ಸಮ್ಮೇಳನ ಸಿದ್ಧತೆ

ಕರ್ನಾಟಕ ಪ್ರಾಂತದ ವಿಶ್ವಹಿಂದೂ ಪರಿಷತ್ತಿನ ಪ್ರಾಂತೀಯ ಸಮ್ಮೇಳನವು ಶ್ರೀ ಕ್ಷೇತ್ರ ಧರ್ಮಸ್ಥಳದಲ್ಲಿ 1983 ರ ಡಿಸೆಂಬರ್ 9, 10, 11, ರಂದು ನಡೆಯಲಿದ್ದು ಆ ಬಗ್ಗೆ ಪೂರ್ವಸಿದ್ಧತೆಗಳಿಗಾಗಿ ಜೂನ್ 25, 26 ರಂದು ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀ ವೀರೇಂದ್ರ ಹೆಗ್ಗಡೆ ಅವರ ಅಧ್ಯಕ್ಷತೆಯಲ್ಲಿ ಪರಿಷತ್ತಿನ ಪ್ರಾಂತೀಯ ಸಮಿತಿ ಹಾಗೂ ಕಾರ್ಯಕರ್ತರ ಸಭೆ ನಡೆಯಿತು.

ಪ್ರಾಂತೀಯ ಸಂಘಟನಾ ಕಾರ್ಯದರ್ಶಿ ಶ್ರೀ ಸದಾನಂದ ಕಾಕಡೆ ಅವರು ಸಮ್ಮೇಳನದ ಗುರಿಯನ್ನು ಮನದಟ್ಟು ಮಾಡಿಕೊಡುತ್ತ, ಇದು ಇಡೀ ಸಮಾಜದ ಮೇಲೆ ಪ್ರಭಾವ ಬೀರುವಂತಿರಬೇಕೆಂದೂ 'ನಾವೆಲ್ಲ ಹಿಂದು ನಾವೆಲ್ಲ ಒಂದು, ನಾವೆಲ್ಲ ಬಂಧು' ಎನ್ನುವ ಭಾವ ಜಾಗೃತವಾಗುವಂತಿರಬೇಕೆಂದೂ ಸಮಾಜದ ಅಭ್ಯುತ್ಥಾನದಲ್ಲಿ ಪ್ರತಿಯೊಬ್ಬರೂ ತಮ್ಮ ತಮ್ಮ ಪಾತ್ರವನ್ನು ತಿಳಿಯುವಂತಿರಬೇಕು ಎಂದೂ ವಿವರಿಸಿದರು.

ಧರ್ಮಾಧಿಕಾರಿಗಳು ಅಧ್ಯಕ್ಷಪೀಠದಿಂದ ಈ ಸಮ್ಮೇಳನವು ದೊಡ್ಡ ಉತ್ಸವದಂತೆ ನಡೆದು ಮರೆತು ಹೋಗುವಂತೆ ಆಗಬಾರದೆಂದೂ ಇಲ್ಲಿ ಭಾಗವಹಿಸುವ ಪ್ರತಿಯೊಬ್ಬ ಪ್ರತಿನಿಧಿಯೂ ತನ್ನ ಹೊಣೆಗಾರಿಕೆಯನ್ನರಿತು ಸಮ್ಮೇಳನದ ನಂತರ ಹಿಂದೂ ಕರ್ತೃತ್ವಶಕ್ತಿಯನ್ನು ಆಚರಣೆಗೆ ತರುವಂತೆ ಆಗಬೇಕೆಂದೂ ಅಪ್ಪಣೆ ಕೊಡಿಸಿದರು.

ಇಂತಹ ಸಮ್ಮೇಳನಗಳು ತನ್ನಷ್ಟಕ್ಕೆ ತಾನೇ ಸತ್ಪರಿಣಾಮಗಳನ್ನು ಹರಡುವುದೆಂದು ನುಡಿದ ಅವರು, ಇಲ್ಲಿ ಸಂಕುಚಿತ ಭಾವ ತೊಲಗಿ ಸಾಮರಸ್ಯದ ಹಾದಿಯಲ್ಲಿ ನಡೆಯುವ ಅವಕಾಶವುಂಟಾಗುವುದೆಂದು ತಿಳಿಸಿದರು. ಇಂತಹ ಸಾಮರಸ್ಯಭಾವಕ್ಕೆ ಪೂರಕವಾಗುವಂತೆ ಕಾರ್ಯಕ್ರಮಗಳನ್ನು ಏರ್ಪಡಿಸಿದಲ್ಲಿ ಸಮ್ಮೇಳನದ ಪರಿಣಾಮ ಉತ್ತಮವಾಗುತ್ತದೆ ಎಂದರು.

ದೇವಾಲಯಗಳು ಹಿಂದೂಗಳ ಶ್ರದ್ಧಾಕೇಂದ್ರಗಳು, ಧರ್ಮವನ್ನು ನೆಲೆಗೊಳಿಸುವ ಸ್ಥಳಗಳು. ಅಂತಹ ದೇವಾಲಯಗಳು ಇಂದು ಜೀರ್ಣಾವಸ್ಥೆಯಲ್ಲಿವೆ. ಇದು ಸರಿಯಾಗಿ ದೇವಾಲಯಗಳಿಗೆ ಸೂಕ್ತ ರಕ್ಷಣೆ ಒದಗಿ ಅವು ನಮ್ಮ ಸಾಂಸ್ಕೃತಿಕ, ಸಾಮಾಜಿಕ ಜೀವನದ ನಾಡಿಯಾಗಿ ಮಿಡಿಯುವಂತೆ ಮಾಡುವ ವಿಷಯವನ್ನು ಸಮ್ಮೇಳನ ಕೈಗೆತ್ತಿಕೊಳ್ಳಬೇಕು ಎಂದು ಸೂಚಿಸಿದರು.

## 1983
# ನವಂಬರ್ ತಿಂಗಳಿನ ಮುಖ್ಯದಿನಗಳು

| | | |
|---|---|---|
| 3 | ಗುರುವಾರ | ವೇದಾಂತದೇಶಿಕರ ಉತ್ಸವಾರಂಭ, ನರಕಚತುರ್ದಶಿ |
| 4 | ಶುಕ್ರವಾರ | ದೀಪಾವಳೀ ಅಮಾವಾಸ್ಯೆ, ಧನಲಕ್ಷ್ಮೀ ಪೂಜೆ, ತಿರುಮಲೆಯಲ್ಲಿ ಆಸ್ಥಾನ |
| 5 | ಶನಿವಾರ | ಆಕಾಶದೀಪ ಪ್ರಾರಂಭ |
| 11 | ಮಂಗಳವಾರ | ಮಣವಾಳ ಮಾಮುನಿ ಶಾತ್ತುಮೊರೆ. |
| 11 | ಶುಕ್ರವಾರ | ತಿರುಮಂಗೈ ಆಳ್ವಾರ್ ಉತ್ಸವಾರಂಭ |
| 12 | ಶನಿವಾರ | ವೇದಾಂತದೇಶಿಕರ ಶಾತ್ತುಮೊರೆ, ತಿರುಮಲೆ ಶ್ರೀ ವೆಂಕಟೇಶ್ವರಸ್ವಾಮಿ ಪುಷ್ಪಯಾಗ |
| 16 | ಬುಧವಾರ | ಪ್ರಬೋಧೈಕಾದಶಿ, ನಾರಾಯಣವನಂ ಶ್ರೀ ಪದ್ಮಾವತೀ ಸಮೇತ ಕಲ್ಯಾಣ ವೆಂಕಟೇಶ್ವರಸ್ವಾಮಿ ತೆಪ್ಪೋತ್ಸವಾರಂಭ |
| 17 | ಗುರುವಾರ | ಚಕ್ರತೀರ್ಥ ಮುಕ್ಕೋಟಿ |
| 20 | ಭಾನುವಾರ | ನಾರಾಯಣವನಂ ಶ್ರೀ ಪದ್ಮಾವತೀ ಸಹಿತ ಕಲ್ಯಾಣ ವೆಂಕಟೇಶ್ವರಸ್ವಾಮಿ ತೆಪ್ಪೋತ್ಸವ ಸಮಾಪ್ತಿ, ಶ್ರೀ ಕಪಿಲೇಶ್ವರ ಸ್ವಾಮಿ ಸನ್ನಿಧಿಯಲ್ಲಿ ಕೃತ್ತಿಕಾದೀಪೋತ್ಸವ |
| 21 | ಸೋಮವಾರ | ತಿರುಪ್ಪಾಣಾಳ್ವಾರ್ ವರ್ಷ ತಿರುನಕ್ಷತ್ರ |
| 28 | ಸೋಮವಾರ | ಶ್ರೀ ಕಪಿಲೇಶ್ವರಸ್ವಾಮಿ ಸನ್ನಿಧಿಯಲ್ಲಿ ಕಾರ್ತೀಕ ಸೋಮವಾರಾಭಿಷೇಕ |
| 30 | ಬುಧವಾರ | ತಿರುಚಾನೂರು ಪದ್ಮಾವತೀದೇವಿ ಬ್ರಹ್ಮೋತ್ಸವಾರಂಭ, ಅಂಕುರಾರ್ಪಣೆ. |



ಸಮ್ಮೇಳನದ ಉಪಾಧ್ಯಕ್ಷರಾದ ಏರ್ಯ ಲಕ್ಷ್ಮೀನಾರಾಯಣ ಆಳ್ವ ಅವರು ಹಿಂದೂ ಸಮಾಜದಲ್ಲಿನ ಈಗಿನ ಐಕ್ಯತಾಭಾವದ ಅಗತ್ಯವನ್ನು ಕುರಿತು ಮಾತನಾಡಿದರು.

ಪರಿಷತ್ತಿನ ಪ್ರಾಂತೀಯ ಅಧ್ಯಕ್ಷ ಶ್ರೀ ಮಧುಸೂದನ ಡಿ. ಕುಶೆ ಅವರು ಸ್ವಾಗತಿಸಿದ ಸಭೆಯಲ್ಲಿ ಕಾರ್ಯದರ್ಶಿ ಶ್ರೀ ಅರವಿಂದ ಬಾಬು ಅವರು ವರದಿನೀಡಿದರು.

1969 ರಲ್ಲಿ ಉಡುಪಿಯಲ್ಲಿ ಪ್ರಥಮ ಸಮ್ಮೇಳನ ನಡೆದಿತ್ತು ಎಂಬುದನ್ನೂ ಅಲ್ಲಲ್ಲಿ ಹಿಂದೂ ಸಾಮ್ರಾಜ್ಯೋತ್ಸವಗಳು ಈ ಮಧ್ಯಕಾಲದಲ್ಲಿ ನಡೆಯುತ್ತ ಬಂದು ಹಿಂದೂಗಳಲ್ಲಿ ಮಾನಸಿಕ ಧೈರ್ಯ ಸಮತೆಗಳು ಹೆಚ್ಚುತ್ತಿವೆಯೆಂಬುದನ್ನೂ ಗಮನಿಸಿದಲ್ಲಿ 1983 ರ ಡಿಸೆಂಬರ್‌ನ ಈ ಸಮ್ಮೇಳನ ಪ್ರಚಂಡ ಯಶ ಗಳಿಸುವುದೆಂದು ನಿರೀಕ್ಷಿಸಲಾಗಿದೆ.

ಈ ಸಮ್ಮೇಳನದ ಸ್ವಾಗತ ಸಮಿತಿಗೆ ಪೂಜ್ಯ ಶ್ರೀ ವೀರೇಂದ್ರ ಹೆಗ್ಗಡೆಯವರು ಅಧ್ಯಕ್ಷರಾಗಿದ್ದು ಪ್ರಧಾನಕಾರ್ಯದರ್ಶಿಗಳಾಗಿ ಶ್ರೀ ಸದಾನಂದ ಕಾಕಡೆ ಹಾಗೂ ಶ್ರೀ ಅಜಿತ ಕುಮಾರ್ ಅವರುಗಳು ವ್ಯವಹರಿಸುವರು. ಇನ್ನಿತರ ಕಾರ್ಯದರ್ಶಿಗಳೆಂದರೆ ಸರ್ವಶ್ರೀ ಡಾ|| ಮಾಧವ ಭಂಡಾರಿ, ಎಲ್. ಶ್ರೀಧರಭಟ್, ಸುಬ್ರಾಯ ಶೆಣೈ, ಮೈ. ನ. ನಾಗರಾಜ, ಬಿ. ಎನ್. ಮೂರ್ತಿ ಅವರುಗಳು.

## ರಕ್ಷಾಪತ್ರ ಸೂಚಿ

ಮುಖಪುಟದಲ್ಲಿ: ನವರಾತ್ರಿ ಬ್ರಹ್ಮೋತ್ಸವದ ರಜತ ರಥೋತ್ಸವ.

ಹಿಂಬದಿಯಲ್ಲಿ: ಚಕ್ರಸ್ನಾನ.

ಒಳಗಡೆ ಪುಟಗಳಲ್ಲಿ: ಆಂಧ್ರಪ್ರದೇಶದ ಗವರ್ನರ್ ಶ್ರೀ ರಾಮಲಾಲ್ ಕುಟುಂಬ ಸಹಿತ ತಿರುಮಲೆ, ತಿರುಚಾನೂರುಗಳನ್ನು ದರ್ಶಿಸಿದಾಗ ತೆಗೆದ ಚಿತ್ರಗಳು.


Edited and Published on behalf of the T. T. Devasthanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501.

